# ಅಚಲ

3

ಜುಲೈ 8, 1990, ಬೆಲೆ : ರೂ. 1-50



ವಿಜಯಾ
ಡಾ|| ಜಿ. ರಾಮಕೃಷ್ಣ
ಚಂದ್ರ
ನೇಮಿಚಂದ್ರ
ಡಾ|| ಕೆ. ವಿ. ನಾರಾಯಣ್
ಕೆ. ವಿಜಯಶ್ರೀ
ಭಾರ್ಗವಿ ನಾಗರಾಜ್

ಸಂಪುಟ ೬ ಸಂಚಿಕೆ ೩

'ಅಚಲ' ಪತ್ರಿಕೆಯನ್ನು ಪಡೆಯಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹತ್ತು ರೂಪಾಯಿಗಳನ್ನು ಎಂ.ಓ/ಡ್ರಾಫ್ಟ್ ಮೂಲಕ ಕಳುಹಿಸಿ.
ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೇ ಕಾರ್ಡಿನಲ್ಲಿ ಬರೆದು ತಿಳಿಸಬೇಕು.

**ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ**
26, 1ನೇ ಮೇನ್, ವ್ಯೆಯಾಳಿಕಾವಲ್
ಬೆಂಗಳೂರು–560 003.

ಪುಸ್ತಕ ವಿಮರ್ಶೆಗಾಗಿ ಪುಸ್ತಕ ಕಳುಹಿಸುವವರು ದಯವಿಟ್ಟು ಎರಡು ಪ್ರತಿಗಳನ್ನು ಕಳುಹಿಸಬೇಕಾಗಿ ವಿನಂತಿ.



**ಚಂದಾ ವಿವರ**
ವಾರ್ಷಿಕ ಚಂದಾ : ರೂ 10–00
ಬಿಡಿ ಪ್ರತಿ : ರೂ 1–50
ವಿಶೇಷ ಪ್ರತಿ : ರೂ 2–50
ಅಜೀವ ಚಂದಾ : ರೂ 100–00

Printed at PRINTSWELL, 78, 2nd Main Road Nagappa Block, Srirampuram, Bangalore–21 & Published by Dr. G. Ramakrishna on behalf of Jagruthi Mahila Adhyayana Kendra
26, I Main, Vyalikaval, Bangalore–560 003.
Editor : N. GAYATRI

## ಅಭಿನಂದನೆ

ಉರ್ದು ಸಾಹಿತ್ಯ ಕ್ಷೇತ್ರದ ಖ್ಯಾತ ಬರಹಗಾರ್ತಿ ಕುರ್ರ‍ಾಟುಲ್ – ಐನ್–ಹೈದರ್ ಅವರಿಗೆ ಭಾರತೀಯ ಸಾಹಿತ್ಯ ಕ್ಷೇತ್ರಕ್ಕೆ ಅವರು 1969 ರಿಂದ 1983 ರವರೆಗೆ, ಸಲ್ಲಿಸಿರುವ ಗಣನೀಯ ಸೇವೆಗಾಗಿ ಭಾರತೀಯ ಜ್ಞಾನಪೀಠ ಪ್ರಶಸ್ತಿ ಸಂದಿದೆ. ಈ ಸಂದರ್ಭದಲ್ಲಿ ಶ್ರೀಮತಿ ಕುರ್ರ‍ಾಟುಲ್–ಐನ್–ಹೈದರ್‌ರವರಿಗೆ ಅಚಲ ತನ್ನ ಅಭಿನಂದನೆಗಳನ್ನು ಸಲ್ಲಿಸುತ್ತದೆ.

## ಸ್ಪಷ್ಟನೆ

'ಅಚಲ'ದ ಲೇಖನಗಳಲ್ಲಿ ವ್ಯಕ್ತವಾಗುವ ಅಭಿಪ್ರಾಯಗಳು ಆಯಾಯ ಲೇಖಕರ ಸ್ವಂತ ಅಭಿಪ್ರಾಯಗಳು. ಇವು ಪತ್ರಿಕೆಯ ಅಭಿಪ್ರಾಯಗಳೂ ಆಗಿರಬೇಕೆಂದೇನಿಲ್ಲ. ಆದರೆ ಇಲ್ಲಿ ಮುಕ್ತ ಚರ್ಚೆಗೆ ಆಹ್ವಾನವಿದೆ.

# ಮುಕ್ತಿಯ ಅನ್ವೇಷಣೆಯಲ್ಲಿ....

ಮೇ ತಿಂಗಳಲ್ಲಿ ನಡೆದ 'ಮುಕ್ತಿ ಎಕ್ಸ್‌ಪ್ರೆಸ್ ಕಾರ್ಯಾಚರಣೆ' ಸಾಮಾಜಿಕವಾಗಿ ಮಹತ್ವದ ಘಟನೆ. ತಮಗಿಷ್ಟವಿಲ್ಲದಿದ್ದರೂ ಸಂದರ್ಭದ ಶಿಶುಗಳಾಗಿ. ಮೈಮಾರಿಕೊಳ್ಳಬೇಕಾದ ಅಸಹಾಯಕತೆಗೆ ಬಲಿ ಪಶುಗಳಾದ ಹೆಣ್ಣುಗಳು ಹೊಸ ಬದುಕಿನ ಬೆಳಕು ಕಾಣುವ ಭರವಸೆಯನ್ನು ಒದಗಿಸಿದ ಮಹತ್ವದ ಘಟನೆ. 1983ರಲ್ಲಿ ಮುಂಬೈಯಲ್ಲಿ ಆರಂಭವಾದ 'ಸಾವಧಾನ್' ಸೇವಾ ಸಂಸ್ಥೆ ವೇಶ್ಯೆಯರ ಸಮಸ್ಯೆಗಳನ್ನು ಮಾನವೀಯವಾಗಿ ಕಂಡು, ಅದರ ನಿವಾರಣೆಗಾಗಿ ಶ್ರಮಿಸುತ್ತಿರುವ ಸಂಸ್ಥೆ. ಈ ಸಂಸ್ಥೆಯ ಅವಿರತ ಪ್ರಯತ್ನದಿಂದಾಗಿ ಹಾಗೂ ತಮಿಳುನಾಡು ಸರ್ಕಾರ ಚಾಚಿದ ಸಹಾಯ ಹಸ್ತದಿಂದಾಗಿ 795 ಮಂದಿ ಮಹಿಳೆಯರು ತಮ್ಮ ನೋವಿನ ಕೂಪದಿಂದ ಹೊರಬರಲು ಸಾಧ್ಯವಾಯಿತು.

ಬೊಂಬಾಯಿಯ ಕೆಂಪು ದೀಪದ ಕೆಳಗೆ ನಡೆಯುವ ದೇಹದ ಮಾರಾಟ ಹೆಣ್ಣು ನಮ್ಮ ಸಮಾಜದಲ್ಲಿ ಏನಾಗಿದ್ದಾಳೆ ಎಂಬುದರ ಸಂಕೇತ. ಬಡತನದಿಂದ ಮೋಸಕ್ಕೊಳಗಾದ, ಧಾರ್ಮಿಕ ಮೂಢನಂಬಿಕೆಗೆ ಬಲಿಯಾಗಿ ದೇವದಾಸಿಯಾದ, ಕಡೆಗೆ ಕೈ ಹಿಡಿದ ಗಂಡ, ಒಡ ಹುಟ್ಟಿದವರಿಂದಲೂ ಮಾರಲ್ಪಡಬಹುದಾದ ಮಹಿಳೆ ವೇಶ್ಯಾವೃತ್ತಿಗೆ ದೂಡಲ್ಪಡುತ್ತಾಳೆ. ಬೆಚ್ಚಗಿನ ಆಶ್ರಯ ತಪ್ಪಿ ನಿರಾಶ್ರಿತರಾಗುವ ಈ ಹೆಂಗಳೆಯರು ಆ ಕೂಪದಿಂದ ಹೊರಬರಲಾಗದಂತಹ ಭದ್ರ ಬೇಲಿಯಾಚೆ ಮುಕ್ತಿಯ ಬೆಳಕಿರಬಹುದೆಂದು ಊಹಿಸಿರಲಾರರು. ಈ ಮುಕ್ತಿಯ ಗಗನ ಕುಸುಮ ಕೈಗೆಟುಕುವಂತಾದಾಗ ಅದನ್ನು ಹಿಡಿದುಕೊಳ್ಳಲು ಈ ಮಹಿಳೆಯರು ಎಷ್ಟು ಸಮರ್ಥರು?

ವಿಮೋಚನೆ ಪಡೆದ ಈ ಮಹಿಳೆಯರು ಹಿಂತಿರುಗಿ ತಮ್ಮ ಮನೆಗಳಿಗೆ ಹೋಗುವ ಮನಸ್ಸು ಮಾಡಿದರೂ ಎಷ್ಟು ಮನೆಗಳಲ್ಲಿ ಅವರನ್ನು ಸ್ವೀಕರಿಸಲು ಸಿದ್ಧರಿರುತ್ತಾರೆ? ಮನೆಗಳಿಗೆ ಹಿಂತಿರುಗದ ಮಹಿಳೆಯರಿಗೆ ಸರ್ಕಾರ ಪುನರ್ವಸತಿ ಹಾಗೂ ಉದ್ಯೋಗ ದೊರಕಿಸುವ ಭರವಸೆಯಿತ್ತರೂ ಅದನ್ನು ಪಡೆಯುವ ಮಹಿಳೆಯರನ್ನು ಸಮಾಜ ಆರೋಗ್ಯಕರವಾಗಿ ಕಾಣುತ್ತದೆಯೇ? ಹಾಗಾಗದಿದ್ದರೆ ಸರ್ಕಾರ ಹಾಗೂ ಸೇವಾಸಂಸ್ಥೆಗಳ ಶ್ರಮ ನಿರರ್ಥಕವಾಗುತ್ತದೆ. ಇಷ್ಟೆಲ್ಲಾ ಅನುಮಾನಗಳ ನಡುವೆಯೂ ನಮ್ಮ ಸಮಾಜದ ಅತ್ಯಂತ ಕಳಂಕಿತ ಹಾಗೂ ಅಮಾನುಷವಾದ ಸಮಸ್ಯೆಯೊಂದರ ಪರಿಹಾರದತ್ತ ಆರೋಗ್ಯಕರವಾದ ಹೆಜ್ಜೆಯಿಟ್ಟಿರುವ ಸಾವಧಾನ್ ಮತ್ತು ತಮಿಳುನಾಡು ಸರ್ಕಾರ ಅಭಿನಂದನಾರ್ಹರು. ಇವರ ಈ ಮೊದಲ ಪ್ರಯತ್ನದ ಅನುಭವದ ಪಾಠದಿಂದ ರಾಷ್ಟ್ರೀಯ ಮಟ್ಟದಲ್ಲೂ ಇಂತಹದೊಂದು ಕಾರ್ಯಾಚರಣೆಯನ್ನು ರೂಪಿಸುವುದು ಹೆಚ್ಚು ಸೂಕ್ತ. ಕಾನೂನು ಸಾಧಿಸುವುದಕ್ಕಿಂತ ಹೆಚ್ಚಿನ ಪರಿಣಾಮ ಇಂತಹ ಆಚರಣೆಗಳಿಂದ ಉಂಟಾಗಿ ಇನ್ನೂ ಹೆಚ್ಚು ಮಹಿಳೆಯರು ಮುಕ್ತಿಯ ಹಾದಿಯಲ್ಲಿ ನಡೆದಾರು.

ಇತ್ತೀಚೆಗೆ ಸೋವಿಯೆತ್ ಯೂನಿಯನ್‌ನಲ್ಲಿ ಉಂಟಾಗುತ್ತಿರುವ ಬದಲಾವಣೆಗಳ ಹಿನ್ನೆಲೆಯಲ್ಲಿ ಅಲ್ಲಿನ ಮಹಿಳೆಯರನ್ನು ಕುರಿತಂತೆ ದೂರದರ್ಶನ, ಪತ್ರಿಕೆಗಳಲ್ಲಿ ಬಿತ್ತರಿಸಲ್ಪಟ್ಟ ಸುದ್ದಿಯೊಂದು ಗಂಭೀರವಾಗಿ ಪರಿಗಣಿಸಬೇಕಾದ್ದೆಂದು ನನ್ನ ಅನಿಸಿಕೆ. ಅಕ್ಟೋಬರ್ ಕ್ರಾಂತಿಯ ನಂತರ ಸೋವಿಯೆತ್ ಮಹಿಳೆಯ ಸ್ಥಿತಿಗತಿಗಳಲ್ಲಿ ಅಪಾರ ಬದಲಾವಣೆ ಉಂಟಾಯಿತು ಮತ್ತು ಅವಳ ಸ್ಥಿತಿ

ಉತ್ತಮಗೊಂಡಿತು, ಎಂಬುದರ ಬಗ್ಗೆ ಎರಡು ಮಾತನಾಡಲು ಸಾಧ್ಯವಿಲ್ಲ. ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಹಾಗೂ ಔದ್ಯೋಗಿಕವಾಗಿಯೂ ಸೋವಿಯೆತ್ ಮಹಿಳೆ ಹಲವಾರು ರಂಗಗಳಲ್ಲಿ ಮುಂದಿದ್ದಾಳೆ. ಆದರೆ ಪ್ರಶ್ನೆಯೆಂದರೆ ಇಂದೂ ಸೋವಿಯೆತ್ ಮಹಿಳೆ ಕುಟುಂಬದ ಮತ್ತು ಉದ್ಯೋಗದ, ಎರಡೂ ಹೊರೆಯಿಂದ ತತ್ತರಿಸುತ್ತಿದ್ದಾಳೆ. ಸಂದರ್ಶಿಸಿದ ಕೆಲವು ಮಹಿಳೆಯರು ಇದಕ್ಕೆ ನೀಡುವ ಪರಿಹಾರವೆಂದರೆ, ಅವರ ಉದ್ಯೋಗದ ಒತ್ತಡವನ್ನು ಕಡಿಮೆ ಮಾಡಿಕೊಳ್ಳುವುದು. ಅದಕ್ಕಾಗಿ ಹಗುರವಾದ ಕೆಲಸವನ್ನೋ, ಅಲ್ಪಾವಧಿ ದುಡಿಮೆಯನ್ನೋ ಕೈಗೆತ್ತಿಕೊಳ್ಳುವುದು. ಇದು ಎಷ್ಟರ ಮಟ್ಟಿಗೆ ಸಾಧುವಾದದ್ದು? ಬಹಳಷ್ಟು ಮಹಿಳೆಯರ ಅಭಿಪ್ರಾಯ ಇದೇ ಆಗಿದೆ. ಈ ಸಂದರ್ಭದಲ್ಲಿ ರಷ್ಯನ್ ಮಹಿಳೆಯೊಬ್ಬಳು ಸೂಚಿಸಿದ ಪರಿಹಾರ ಗಮನಾರ್ಹವಾದದ್ದು. ದಿನನಿತ್ಯದ ಸಾಮಗ್ರಿಗಳಿಗಾಗಿ ಗಂಟಗಟ್ಟಲೆ ಕ್ಯೂ ನಿಲ್ಲುವುದನ್ನು ತಪ್ಪಿಸಿದರೆ ಅದರಿಂದ ಮಹಿಳೆಯರಿಗೆ ತುಂಬ ಅನುಕೂಲವಾಗುತ್ತದೆ.

ಅಂತರರಾಷ್ಟ್ರೀಯ ಮಹಿಳಾ ದಶಕದ ಸಂದರ್ಭದಲ್ಲಿ ನೈರೋಬಿಯಲ್ಲಿ ನಡೆದ ವಿಶ್ವಮಹಿಳಾ ಸಮ್ಮೇಳನದಲ್ಲೂ ಮಹಿಳೆಯ ದುಡಿಮೆಯನ್ನು ಕುರಿತಂತೆ ಇಂತಹುದೇ ಅಪಸ್ವರದ ಧ್ವನಿಯೊಂದು ಕೇಳಿಬಂತು. 'ಮಹಿಳೆ ಮನೆಯಲ್ಲಿ ಮಾಡುವ ಕೆಲಸಕ್ಕೆ ವೇತನ ಕೊಡಬೇಕು. ಗಂಡನಲ್ಲ, ಸರ್ಕಾರ' ಎನ್ನುವ ಅಭಿಪ್ರಾಯ ಕೆಲವರದಾದರೆ, 'ಗಂಡನೇ ಹೆಂಡತಿಯ ದುಡಿಮೆಗೆ ಕೂಲಿ ಕೊಡಬೇಕು' ಎಂಬ ಅಭಿಪ್ರಾಯವುಳ್ಳವರೂ ಇದ್ದರು. ಮಹಿಳೆಯರ ಗೃಹಕೃತ್ಯದ ಶ್ರಮವನ್ನು ಬೆಲೆಯುಳ್ಳ ದುಡಿಮೆಯನ್ನಾಗಿಸಬೇಕೆಂಬ ಈ ವಾದ ಅತಿರೇಕದ್ದು. ಕಳೆದ ಕೆಲವು ವರ್ಷಗಳಿಂದಲೂ ಇದಕ್ಕಾಗಿಯೇ ಸಹಿ ಸಂಗ್ರಹ ಮಾಡಹೊರಟಿರುವ ಪಾಶ್ಚಾತ್ಯ ಮಹಿಳಾ ಚಳುವಳಿಗಾರರು ಗೃಹಕೃತ್ಯಕ್ಕೆ ಕೂಲಿ ಕೊಡಿಸುತ್ತೇವೆಂದು ಮಾನವೀಯ ಮೌಲ್ಯಕ್ಕೆ ಕೈ ಹಾಕದಿರಲಿ, ಗೃಹಕೃತ್ಯದ ಎಲ್ಲ ಕೆಲಸಗಳಿಗೆ ಕೂಲಿಯ ಹಣ ಸಿಗುವುದಾದರೆ, 'ಮಡದಿ' 'ತಾಯಿ'ಯರ ಅವಶ್ಯಕತೆಯಿಲ್ಲದಂತಾಗಿ ಎಲ್ಲ ಮಾನವೀಯ ಸಂಬಂಧಗಳು ಕೊಡು–ಕೊಳ್ಳುವ ವ್ಯವಹಾರವಾಗುವುದಲ್ಲಿ ಸಂಶಯವಿಲ್ಲ. ಅಷ್ಟೇ ಅಲ್ಲ, ಮೂಲಭೂತವಾದ ಗಂಡು ಹೆಣ್ಣಿನ ಸಮಾನತೆಗಾಗಿ ಇನ್ನೂ ನಡೆಯಬೇಕಾಗಿರುವ ಅಗಾಧವಾದ ಆರ್ಥಿಕ ಮತ್ತು ರಾಜಕೀಯ ಚಳುವಳಿಯ ಅವಶ್ಯಕತೆಯನ್ನು ಇದು ಎತ್ತಿ ತೋರಿಸುತ್ತದೆ. ಈ ವಿಶ್ವ ಮಹಿಳಾ ಸಮ್ಮೇಳನದಲ್ಲಿ ಮಹಿಳೆಯ ಗೃಹಕೃತ್ಯದ ದುಡಿಮೆಗೆ ಕೂಲಿ ಕೊಡಬೇಕೆಂಬ ವಾದವನ್ನು ತಿರಸ್ಕರಿಸಿದ ಭಾರತದ ದೇವಕಿ ಜೈನ್ ಅಭಿಪ್ರಾಯ ಗಮನಾರ್ಹವಾದ್ದು: "ಅಭಿವೃದ್ಧಿಶೀಲ ರಾಷ್ಟ್ರಗಳ ಬಡ ಮಹಿಳೆ ಒಂದು ಬಿಂದಿಗೆ ನೀರು ತರಲು ಆರು ಗಂಟೆ ತೆಗೆದುಕೊಳ್ಳುತ್ತಾಳೆಂದುಕೊಳ್ಳಿ. ಅದಕ್ಕೆ ಅವಳಿಗೆ ಎರಡೇ ಗಂಟೆ ಸಾಕಾಗುವಂತೆ ಮಾಡದರೆ ಉಳಿದ ಸಮಯವನ್ನು ಅವಳು ಹೆಚ್ಚು ಕೂಲಿ ಪಡೆಯಲು ತೊಡಗಿಸುತ್ತಾಳೆ. ಬಹಳಷ್ಟು ಮಹಿಳೆಯರು ವೇತನ ಸಹಿತ ಮತ್ತು ರಹಿತ ದುಡಿಮೆ ಮಾಡುತ್ತಿದ್ದಾರೆ. ನಮಗೆ ಈಗ ಅಗತ್ಯವಾಗಿರುವುದು ಮನೆಗೆಲಸವನ್ನು ಹಗುರ ಮಾಡುವ ವಿಧಾನ, ಮೂಲಭೂತ ಅಗತ್ಯಗಳ, ಮೂಲಭೂತ ಹಕ್ಕಾಗುವಂತೆ ಹಾಗೂ ಈ ಸಾಮಾಜಿಕಸೇವೆ ಬಂಡವಾಳವಾಗುವ ವ್ಯವಸ್ಥೆ." ಇದು ಅಕ್ಷರಶ ಸತ್ಯ, ಇವಕ್ಕೆಲ್ಲಾ ಜೊತೆ ಜೊತೆಯಲ್ಲೇ ಆಗಬೇಕಾದ್ದು ಸ್ತ್ರೀ–ಪುರುಷರಿಬ್ಬರೂ ಮನೆಗೆಲಸವನ್ನು ಸಮಸಮವಾಗಿ ಹಂಚಿಕೊಳ್ಳಬಲ್ಲಂತಹ ಮಾನಸಿಕ ಸಿದ್ಧತೆಯನ್ನು, ಅದಕ್ಕೆ ತಕ್ಕ ವಾತಾವರಣವನ್ನು ರೂಪಿಸಬೇಕು. ಶತಮಾನಗಳಿಂದಲೂ ಮಾನಸಿಕವಾಗಿಯೂ, ದೈಹಿಕವಾಗಿಯೂ ಗೃಹಚಾಕರಿಗೆ ತಮ್ಮನ್ನು ಒಗ್ಗಿಸಿಕೊಳ್ಳದ ಪುರುಷ ಸಮುದಾಯವನ್ನು ಈ ದಿಸೆಯತ್ತ ಬಗ್ಗಿಸುವ ಕೆಲಸ ಈಗ ತುರ್ತಾಗಿ ಮಾಡಬೇಕಾಗಿದೆ.

—ಎನ್. ಗಾಯತ್ರಿ

# ಟಿಪ್ಪು ಮತ್ತು ಸುಧಾರಣೆ

ಭಗವಾನ್ ಎಸ್. ಗಿದ್ವಾನಿಯವರ 'ಸೋರ್ಡ್ ಆಫ್ ಟಿಪ್ಪು ಸುಲ್ತಾನ್' ಪುಸ್ತಕದ ಚಾರಿತ್ರಿಕ ನಿಖರತೆಯ ಬಗ್ಗೆ ಈಗಾಗಲೇ ಭಾರೀ ವಾದ–ವಿವಾದಗಳು ನಡೆದಿವೆ. ಗಿದ್ವಾನಿಯವರ ಕತೆಯ ಕಲ್ಪನೆ ಎಷ್ಟೇ ಇರಲಿ, ಲಭ್ಯವಿರುವ ಟಿಪ್ಪುವಿನ ಶಾಸನಗಳು, ಪತ್ರಗಳು, ಲಿಖಿತ ಟಿಪ್ಪಣಿಗಳು, ಟಿಪ್ಪು ಸ್ತ್ರೀಯರ ಬಗ್ಗೆ ತೋರಿದ ಗೌರವಯುತ ಕಳಕಳಿಯನ್ನು ಉಲ್ಲೇಖಿಸುತ್ತವೆ. ಅಂಥ ಒಂದೆರಡು ಘಟನೆಗಳನ್ನು ಇಲ್ಲಿ ಆಯ್ದು ನೀಡಲಾಗಿದೆ.

○ ನೇಮಿಚಂದ್ರ

ಗಂಡು ಮಕ್ಕಳಿಲ್ಲದ ಹೈದರ್ ಅಲಿ–ಫಕ್ರುನ್ನೀಸಾ, ಸಂತ ಟಿಪ್ಪು ಮಸ್ತಾನ್ ಬಲಿಯಾಗೆ ಹರಕೆ ಹೊತ್ತು ಹುಟ್ಟಿದ್ದು–ಟಿಪ್ಪು ಸುಲ್ತಾನ್. ಮೊದಲ ಮಗನನ್ನು ದೇವರ ಸೇವೆಗೆಂದೇ ಬಿಡುವುದಾಗಿ ಒಪ್ಪಿಕೊಂಡಿದ್ದ ಹೈದರ್, ಟಿಪ್ಪುವನ್ನು ದೇವರ ಸೇವೆಗೆಂದೇ ತಯಾರಿಸಿದ. ಮೌಲ್ವಿ ಅಬ್ದುಲ್ಲಾ ಹಾಗೂ ಗೋವರ್ಧನ ಪಂಡಿತರಂಥಾ ಧಾರ್ಮಿಕ ಗುರುಗಳ ಕೆಳಗೆ ಟಿಪ್ಪು ಹಿಂದೂ–ಮುಸಲ್ಮಾನ ಧರ್ಮಗಳೆರಡರ ಸಾರವನ್ನು ಹೀರಿ ಬೆಳೆದ. ಅನಾರೋಗ್ಯದ ಎರಡನೇ ಮಗ ತನ್ನ ಉತ್ತರಾಧಿಕಾರಿ ಆಗುವುದು ಅಸಂಭವ ಅನಿಸಿದಾಗ, ಹೈದರ್ ಹನ್ನೆರಡು ವರ್ಷದ ಟಿಪ್ಪುವನ್ನು ದೇವರ ಹಾದಿಯಿಂದ ಹಿಂತೆಗೆದುಕೊಂಡ. ಕ್ಷತ್ರಿಯ ಕ್ಷೇತ್ರಕ್ಕೆ ನುಗ್ಗಿಸಿದ. ಅಂದಿನಿಂದ ಟಿಪ್ಪು ಕ್ಷತ್ರಿಯನಾಗಿ ಹೋರಾಡಿದ. ಬ್ರಿಟಿಷರ ವಿರುದ್ಧವಾಗಿ ಕತ್ತಿ ಎತ್ತಿದ. ರಣಹೇಡಿ ರಾಜರುಗಳ ನಡುವೆ, ರಣರಂಗದಲ್ಲಿ ಹೋರಾಡುತ್ತಾ ಮಡಿದ ಏಕೈಕ ರಾಜನಾಗಿ ಉಳಿದ. ಆತ ಎಂದೆಂದಿಗೂ ಆಳದಲ್ಲಿ ಧರ್ಮರಕ್ಷಕನಾಗಿಯೇ ಉಳಿದ, ಹನ್ನೆರಡು ವರ್ಷಗಳ ಅವನ ಧರ್ಮ ಸಹಿಷ್ಣುತೆಯ ಪಾಠ ವ್ಯರ್ಥವಾಗಿರಲಿಲ್ಲ.

ತನ್ನ ಕಾಲದಲ್ಲಿ, ಟಿಪ್ಪು ಅನೇಕ ಸುಧಾರಣೆಗಳ ತಂದ. ಯುದ್ಧ ಎಂದೊಡನೆ, ಗೆದ್ದವನು ಯಾವುದೇ ಮಾನವೀಯತೆ ಇಲ್ಲದೆ ಸೋತ ರಾಜ್ಯಗಳ ತುಳಿದು ಮೆಟ್ಟುತ್ತಿದ್ದ. ಲೂಟಿ ಹೊಡೆಯುವುದಂತೂ ಸಾಮಾನ್ಯವಿತ್ತು. ಹೆಂಗಸರ ಮಾನಸೋ ಇಚ್ಛೆ ಭೋಗಿಸುವುದು ಯುದ್ಧದ ಒಂದು ದೊಡ್ಡ ಆಕರ್ಷಣೆಯಾಗಿತ್ತು. ಇಂಥ ಅನೀತಿಯ ಯುದ್ಧ ರೀತಿಗಳನ್ನು ಟಿಪ್ಪು ಪ್ರಬಲವಾಗಿ ಖಂಡಿಸಿದ. 1783ರ ಡಿಕ್ರಿಯಲ್ಲಿ "ಲೂಟಿ ಹೊಡೆಯುವುದು ಕೆಲವರನ್ನು ಶ್ರೀಮಂತರಾಗಿಸಬಹುದು. ಆದರೆ ಇಡೀ ದೇಶವನ್ನು ಬಡವಾಗಿಸುತ್ತದೆ. ಇಡೀ ಸೇನೆಗೇ ಇದು ಅವಮರ್ಯಾದೆ. ಯುದ್ಧಗಳು ರಣರಂಗಕ್ಕೆ ಮಾತ್ರ ಮೀಸಲಿರಬೇಕು. ಮುಗ್ಧ ನಾಗರೀಕರೆತ್ತ ಎಳೆಯುವುದು ಬೇಡ. ಅವರ ಹೆಂಗಸರ ಗೌರವಿಸಿ, ಅವರ ಧರ್ಮವನ್ನು ಗೌರವಿಸಿ, ಅವರ ಮಕ್ಕಳನ್ನು ರಕ್ಷಿಸಿ' ಎನ್ನುತ್ತದೆ. ಇಲ್ಲಿ ಟಿಪ್ಪುವಲ್ಲಿ ಕಾಣುವುದು ವೈಯಕ್ತಿಕ ಮಹತ್ವಾಕಾಂಕ್ಷೆಯ ಉದ್ಧಟ ರಾಜನನ್ನಲ್ಲ, ಮಾನವೀಯತೆ, ಧರ್ಮ ರಕ್ಷಣೆಯ ಹಾದಿಯ ಸುಲ್ತಾನನನ್ನು."

1787 ರಲ್ಲಿ ಟಿಪ್ಪು ಸಾರಾಯಿ ತಯಾರಿಸುವುದು ಹಾಗೂ ಕುಡಿಯುವುದನ್ನು ನಿಷೇಧಿಸಿದ. ತಪ್ಪೊಪ್ಪಿಕೆ ಪಡೆಯಲು ಅಪರಾಧಿಗಳಿಗೆ ಕೊಡುತ್ತಿದ್ದ ಚಿತ್ರಹಿಂಸೆಯ ತಡೆದ. ಮಲಬಾರಿನ ಗವರ್ನರ್ ಕೂಲಿ ನೀಡದೆ ಚಡಿಏಟಿನ ಬಲದಿಂದ ದುಡಿಸಿಕೊಳ್ಳುತ್ತಿರುವ ಕಾರ್ಮಿಕರ ವಿಷಯ ತಿಳಿದಾಗ, ಅವರ ಹಿಂದಿನ ದುಡಿತಕ್ಕೆಲ್ಲ ಸಂಬಳ ನೀಡುವಂತೆ ಆಜ್ಞೆ ಮಾಡಿದ್ದಲ್ಲದೆ, 1789 ರಲ್ಲಿ, ಮುಂದೆಂದೂ ತಮ್ಮ ರಾಜ್ಯದಲ್ಲಿ ಸಂಬಳವಿಲ್ಲದೆ, ಗುಲಾಮರಂತೆ ದುಡಿಸಿಕೊಳ್ಳುವುದನ್ನು ನಿಷೇಧಿಸಿದ. ಮೋಜಿಗಾಗಿ ಪ್ರಾಣಿ–ಪಕ್ಷಿಗಳ ಬೇಟೆಯಾಡುವುದನ್ನು ನಿಯಂತ್ರಿಸಿದ. ಕಾವೇರಿ ನದಿ ದಂಡೆಯಲ್ಲಿದ್ದ ಮದ್ದಿನ ಕಾರ್ಖಾನೆಯಿಂದ ನದೀ ನೀರು ಕಲುಷಿತವಾಗಿ ಮೀನುಗಳು ಸಾಯುತ್ತಿರುವ ಸುದ್ದಿ ತಿಳಿದಾಗ, ಕಾರ್ಖಾನೆಯನ್ನೇ ಬೇರೆ ಜಾಗಕ್ಕೆ ರವಾನಿಸಿದ. ಇಂಥಾ ಟಿಪ್ಪು ಹೆಂಗಸರ ಬಗ್ಗೆ ತೋರಿದ ಕಳಕಳಿಯನ್ನು ಆತ 1785 ರಲ್ಲಿ

ಮಲಬಾರಿನ ಗವರ್ನರ್‌ಗೆ ಬರೆದ ಕೆಳಗಿನ ಪತ್ರದಲ್ಲಿ ಕಾಣಬಹುದು.

"ಮಲಬಾರಿನ ಕೆಲವು ಪಂಗಡದ ಹೆಂಗಸರು ತಮ್ಮ ಎದೆಯನ್ನು ನಗ್ನವಾಗಿ ಬಿಟ್ಟು ಓಡಾಡುವುದನ್ನು ನೋಡಿ ತುಂಬಾ ನೋವಾಯಿತು. ಅಂಥಾ ದೃಶ್ಯ ಉತ್ತಮ ಅಭಿರುಚಿಯದಲ್ಲ, ನೀತಿಯುತವಾಗಿಯೂ ಕಾಣುವುದಿಲ್ಲ. ಈ ಹೆಂಗಸರು ಕೆಳವರ್ಗದ ಜಾತಿ ಪಂಗಡಗಳಿಗೆ ಸೇರಿದವರಾಗಿದ್ದು, ಅವರ ಪದ್ಧತಿಯ ಪ್ರಕಾರ ಸೊಂಟದ ಮೇಲೆ ಮುಚ್ಚಿಕೊಳ್ಳಬಾರದೆಂದು ನೀವು ವಿವರಿಸಿದ್ದಿರಿ. ಆಗಿನಿಂದಲೂ ನಾ ಚಿಂತಿಸುತ್ತಿದ್ದೇನೆ. ಇದು ಹಿಂದಿನಿಂದ ಬಂದ ಪದ್ಧತಿಯ ಪ್ರಶ್ನೆಯೆ? ಅಥವಾ ಆ ಜಾತಿಯ ಬಡತನ ಇದಕ್ಕೆ ಕಾರಣವೇ? ಬಡತನವೇ ಕಾರಣವಿದ್ದರೆ ಈ ಕ್ಷಣ ಆ ಹೆಂಗಸರ ಮೈ ಮುಚ್ಚಿಕೊಳ್ಳಲು ಅವರೆಲ್ಲ ಬೇಡಿಕೆಗಳ ಈಡೇರಿಸುವತ್ತ ನಿಮ್ಮ ಪ್ರಯತ್ನ ಸಾಗಲಿ. ಅದು ಒಂದು ಪಕ್ಷ ಹಿಂದಿನಿಂದ ಬಂದ ರೂಢಿ–ನಿಯಮವೇ ಆಗಿದ್ದಲ್ಲಿ ನೀವು ಆ ಗುಂಪಿನ ಧಾರ್ಮಿಕ ಗುರುಗಳೊಡನೆ ಚರ್ಚಿಸಿ, ನಿಮ್ಮ ಪ್ರಭಾವದಿಂದ ಅವರನ್ನು ಪರಿವರ್ತಿಸಲು ಸಾಧ್ಯವೆ ನೋಡಿ. ಈ ದಿಕ್ಕಿನಲ್ಲಿ, ಅವರ ಧಾರ್ಮಿಕ ನಂಬಿಕೆಗಳಿಗೆ ಯಾವುದೇ ಧಕ್ಕೆ ಆಗದಂತೆ ನಿಮ್ಮ ಸ್ನೇಹಯುತ ಪ್ರಯತ್ನವಿರಲಿ. ನೀವು ಮಂಡಿಸಬೇಕಾದ ವಾದಗಳು, ಈ ಪದ್ಧತಿಯು ನಿಂತಿರುವ ಬುನಾದಿಯ ಮೇಲೆ ಅವಲಂಬಿಸುತ್ತದೆ. ಈ ದಿಕ್ಕಿನಲ್ಲಿ ಕೆಳಕಂಡ ವಿಷಯಗಳು ಮನಸ್ಸಿನಲ್ಲಿರಲಿ—

—ಈ ಪದ್ಧತಿ ಇದೇ ರೀತಿ ಗಂಡಸರ ಬಗ್ಗೆಯೂ ಏನಾದರೂ ವಿಕಲತೆಗಳ ಹೇರಿದೆಯೆ? ಇಲ್ಲದಿದ್ದರೆ ಕೇವಲ ಹೆಂಗಸರ ಮೇಲಿನ ಇಂಥಾ ಒತ್ತಾಯಗಳು ನ್ಯಾಯಕ್ಕೆ ವಿರೋಧವಷ್ಟೇ ಅಲ್ಲ, ಪಕ್ಷಪಾತದ್ದಾಗುತ್ತದೆ.

—ಈ ರೂಢಿ ಈ ಗುಂಪಿನವರ ಬಡತನದಿಂದ ಇಲ್ಲ ರಾಜನೊಬ್ಬನ ಶಿಕ್ಷೆಯಾಗಿ ವಿಧಿಸಲ್ಪಟ್ಟಿದ್ದೇ ಆಗಿದ್ದರೆ, ರಾಜ್ಯ ಈ ದಿಕ್ಕಿನತ್ತ ತಕ್ಷಣ ಸಹಾಯ ಮಾಡಬಹುದು.

—ಈ ರೂಢಿ ಬಡತನದ ಫಲವಾಗದೆ ಪುರಾತನ ಸಂಪ್ರದಾಯವಾಗಿದ್ದಲ್ಲಿ, ಈ ಪಂಗಡದ ಗಂಡುಮಕ್ಕಳು ತಮ್ಮ ತಾಯಂದಿರನ್ನು ಅರ್ಧ ನಗ್ನರಾಗಿ, ಸುತ್ತು ಜನರ ಅಪಹಾಸ್ಯಕ್ಕೆ ಗುರಿಯಾಗುವಂತೆ ಬಿಟ್ಟ ತಮ್ಮ ಹಿರಿಯರ ಬಗ್ಗೆ ಎಂಥ ಗೌರವ ಹೊಂದಿರಲು ಸಾಧ್ಯ? ಈ ದಿಕ್ಕಿನಲ್ಲಿ ನಿಮ್ಮ ಚರ್ಚೆ ಇರಲಿ.

ಈ ಪತ್ರ ಹೀಗೇ ಮುಂದುವರೆದು ಆ ಪದ್ಧತಿಯನ್ನು ಸುಧಾರಿಸುವತ್ತ ನಾನಾ ಉಪಾಯಗಳ ಮಂಡಿಸಿವೆ. ಈ ಪತ್ರದಲ್ಲಿ ಟಿಪ್ಪುವಿನ ಪರಧರ್ಮಕ್ಕೆ ನೀಡುವ ಮರ್ಯಾದೆಯಲ್ಲದೆ, ಅಂಥಾ ಪುರಾತನ ಸಂಪ್ರದಾಯಗಳನ್ನು ಪ್ರಶ್ನಿಸುವ ಚಿಂತನೆಯ ಮನಸ್ಸೂ ಕಾಣುತ್ತದೆ. ಅದರ ಹಿಂದೆಯೇ ಗಂಡಿಗಿಲ್ಲದೆ, ಹೆಂಗಸಿಗಷ್ಟೇ ವಿಧಿಸಿದ ನಿಯಮಗಳ ಪ್ರಶ್ನಿಸಿದೆ, ಇಂಥಾ ಧರ್ಮ ಸೂಕ್ಷ್ಮದ ವಿಷಯಗಳಲ್ಲಿ ಅತ್ಯಂತ ನಯವಾಗಿ ನಾಜೂಕಾಗಿ ವರ್ತಿಸಬೇಕಾದ ಜಾಣ್ಮೆಯನ್ನು ತಿಳಿಸುತ್ತದೆ. ಹೀಗಿದ್ದೇ ಟಿಪ್ಪು ಮೈಸೂರನ್ನಾಳಿದ ಓರ್ವ ಸುಲ್ತಾನನಾಗಿ ಮಾತ್ರ ಅಲ್ಲ, ಈ ಜನರ ನಾಡಿ ಬಡಿತವ ಗಮನಿಸಿದ, ನಿಯಂತ್ರಿಸಿದ ಮಾನವೀಯ ವೀರನೂ ಹೌದೇನೋ ಅನ್ನಿಸುವುದು ಸುಳ್ಳಲ್ಲ. ⊙

ಹೀಗೆ ಸಾಗದಿರಬಹುದು. ಈಗಾಗಲೇ ಬ್ರಾಡ್‌ವೇಯಲ್ಲಿ ಲೇಖಕಿಯರ ಸಂಖ್ಯೆ ಶೇಕಡ ಇಪ್ಪತ್ತೊಂದು. ಇದು ಶೇಕಡಾ 30–40 ಆದಾಗ ಸಂಸ್ಥೆ ಸ್ವತಂತ್ರವಾಗುತ್ತದೆ. (ಈಚೆಗೆ 1980ರಲ್ಲಿ ಈ ಸಂಸ್ಥೆ ಸ್ವತಂತ್ರವಾಗಿದೆ ಎಂದು ಕೇಳಿದ್ದೇನೆ). ಆಗ ಈ ವಿಮೆನ್ಸ್ ಪ್ರಾಜೆಕ್ಟ್‌ನ ಅಗತ್ಯ ಇರುವುದಿಲ್ಲ ಎನ್ನುತ್ತಾರೆ ಮೈಲ್ಸ್.

ಸಂಖ್ಯಾ ದೃಷ್ಟಿಯಿಂದ ಮಾತ್ರ ಸೃಜನಶೀಲತೆಯನ್ನು ಲೆಕ್ಕಿಸುವ ಈ ಪರಿಯಲ್ಲೇ ಏನೋ ದೋಷವಿದೆ. ಈ ಕ್ರಿಯೆ ತಲೆಗಳ ಲೆಕ್ಕದ್ದಲ್ಲ. ಬುದ್ಧಿ–ವಿಚಾರಗಳ ಹಂತದಲ್ಲಿ ಗಂಭೀರವಾದ ಪ್ರತಿಪಾದನೆಯಿಂದ ಮಾತ್ರ ತನ್ನ ಸ್ಥಾನವನ್ನು ಕಾಯ್ದುಕೊಳ್ಳಬೇಕು. ಅಮೆರಿಕೆಯ ವಾತಾವರಣ ಅಂಕಿ–ಅಂಶಗಳ ನೆಲೆಯಲ್ಲಿ ಮಾತ್ರ ಕೆಲಸ ಮಾಡುತ್ತಿದೆಯೆ?

ಮೈಲ್ಸ್ ನಾಟಕವೊಂದನ್ನು ನೋಡಿ ಮೆಚ್ಚಿ ತಾನೂ ಅಭಿನೇತ್ರಿಯಾಗುವ ಕನಸು ಕಂಡರು. ಆದರೆ ಒಳಹೊಕ್ಕು ನೋಡಿದಾಗ ನಟನೆಯನ್ನು ಮೆಚ್ಚಿದವರು ವೈಯಕ್ತಿಕ ಬದುಕನ್ನು ಕಳೆದುಕೊಳ್ಳುತ್ತಾರೆ – ಎಂಬ ನಿಲುವಿಗೆ ಬಂದು ತನ್ನ ಬದುಕಿನ ಬಗ್ಗೆ ನಿಯಂತ್ರಣ ಇರಬೇಕು ಎಂಬ ಕಾರಣಕ್ಕಾಗಿ ಮಾತ್ರ ಆಕೆ ರಂಗಭೂಮಿಯ ಹಿನ್ನೆಲೆಯಲ್ಲಿ ರಂಗಸಜ್ಜಿಕೆ, ರಚನೆ, ನಿರ್ದೇಶನ –ಇತ್ಯಾದಿಗಳಲ್ಲಿ ತೊಡಗಿಕೊಂಡರಂತೆ!

ಅಮೆರಿಕೆಯಂಥ ರಾಷ್ಟ್ರದಲ್ಲಿ ಎಲ್ಲ ರೀತಿಯಿಂದಲೂ ವೈರುಧ್ಯಗಳೇ ತುಂಬಿರುವಾಗ ಅದರ ಸಾಂಸ್ಕೃತಿಕ ವೈರುಧ್ಯ ಮತ್ತು ವರ್ಗ–ವರ್ಣ–ಜಾತಿಗಳ ಸಂಕೀರ್ಣತೆಯ ಮಧ್ಯ ಸ್ತ್ರೀ ತನ್ನ ಕ್ರಿಯಾಶೀಲ ಚಟುವಟಿಕೆಯಲ್ಲಿ ತೊಡಗುವುದು ಅಸಾಧ್ಯವಾಗುತ್ತಿದೆ—ಹಿಂಸೆ ಅನ್ನಿಸುತ್ತಿದೆ ಎಂಬುದು ಆಕೆಯ ನಿಲುವು.

ಈ ಸಮಕಾಲೀನ ಸಮಾಜದ ಎಲ್ಲ ಸಂಕೀರ್ಣತೆಯನ್ನು ಒಳಗೊಂಡು ತನ್ನ ಪರಿಸರ–ಜಾಯಮಾನಗಳಿಗೆ ಹೊಂದಿಕೊಂಡು ಮಹಿಳೆ ರಂಗಭೂಮಿಯನ್ನು ತನ್ನ ಅಭಿವ್ಯಕ್ತಿಗೆ ಪ್ರಶ್ನಿಸುವ ಪ್ರವೃತ್ತಿಗೆ ಅರ್ಥಪೂರ್ಣವಾಗಿ ಬಳಸಿಕೊಳ್ಳಬೇಕು. ಆ ದಿಕ್ಕಿನಲ್ಲೇ W P P ಯ ಸಾಧನೆಯೂ ಇದೆ ಎಂದು ವಿವರಿಸುತ್ತಾರೆ ಮೈಲ್ಸ್.

ಮೈಲ್ಸ್ ತಮ್ಮ ಏಳು ನಾಟಕಗಳ ಸಂಕಲನದಲ್ಲಿ ಈ ಬಗ್ಗೆ ವಿವರವಾದ ಮುನ್ನುಡಿ ಬರೆದುಕೊಂಡಿದ್ದಾರೆ. ಸಾಮಾನ್ಯವಾಗಿ ಹೆಣ್ಣು ಮಕ್ಕಳನ್ನು ತ್ಯಾಗ-ಪ್ರೇಮ-ಸೇವೆಗಳ ವೈಭವದ ಮೂಲಕವೇ ಗುರುತಿಸುವ ಪುರುಷ ಮನಸ್ಸು 'ಜೋನ್ ಆಫ್ ಆರ್ಕ್'ಳ ಬಗ್ಗೆ ಹೀಗೆ ಚಿತ್ರಿಸಿದೆ.–ಆದರೆ ಆಕೆ ಸೈನಿಕರ ನಡುವೆ ಬದುಕಿದ್ದು, ಅವರಲ್ಲಿ ಧೈರ್ಯ ತುಂಬಿದ್ದು, ಯುದ್ಧ ಸಂಬಂಧೀ ಕೆಲಸಗಳಲ್ಲಿ ಆಕೆ ತೊಡಗಿದ್ದು ಮೊದಲಾದ ಅಂಶಗಳನ್ನು ಯಾರೂ ಗಮನಿಸಲೇ ಇಲ್ಲ ಎನ್ನುವ ಮೈಲ್ಸ್ ಈ ಮತ್ತೊಂದು ಮುಖವನ್ನೇ ಪ್ರಧಾನವಾಗಿಸಿ ನಾಟಕ ಬರೆದು ಆಡಿಸಿದ್ದಾರೆ. ಆದರೆ ಅನೇಕ ಸಂದರ್ಭಗಳಲ್ಲಿ ಮಹಿಳೆ ಎಂಥ ವಿಚಿತ್ರ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎಂಬುದಕ್ಕೆ ಅವರದೇ ಆದ ಒಂದು ಉದಾಹರಣೆಯನ್ನು ಕೊಡುತ್ತಾರೆ, ಆಕೆ ಪುರುಷ ಪಾತ್ರಧಾರಿಗಳೇ ಇರುವ ನಾಟಕವೊಂದನ್ನು ಬರೆದು ಪ್ರದರ್ಶಿಸಿದಾಗ ಪುರುಷರು ಸ್ತ್ರೀಯರಿಗೇನು ಗೊತ್ತಾಗುತ್ತದೆ ಪುರುಷರ ವರ್ತನೆ, ಒಳತೋಟಿ...... ಎಂಬಂಥ ಆಕ್ಷೇಪ ವ್ಯಕ್ತಪಡಿಸಿದರಂತೆ. ಅದೇ ಸರಿ ಸುಮಾರಿಗೆ ಪುರುಷರು ಕೇವಲ 5–6 ಸ್ತ್ರೀ ಪಾತ್ರಗಳು ಮಾತ್ರ ಇದ್ದ ನಾಟಕ ಪ್ರದರ್ಶಿಸಿದಾಗ ಇಂಥ ಒಂದೇ ಒಂದು ಸಣ್ಣ ಆಕ್ಷೇಪವೂ ಏಳಲಿಲ್ಲವಂತೆ! ಹೀಗೆ ಸ್ತ್ರೀ–ಪುರುಷರಲ್ಲಿ ಅನುಭವಗಳು ಕೆಲವರಿಗೆ ಮಾತ್ರ ದಕ್ಕಿ, ಕೆಲವರಿಗೆ ಅಸಾಧ್ಯ ಎಂಬ ನಿರ್ಧಾರ ತೆಗೆದುಕೊಂಡು ಮಾತನಾಡುವವರ ಬಗ್ಗೆ ಆಕೆಗೆ ಬೇಸರ.

ಮೈಲ್ಸ್ ಅವರು ತಾವು ಸೈನಿಕರನ್ನು ಕುರಿತು ಬರೆದ ಒಂದು ನಾಟಕವನ್ನು ಪ್ರದರ್ಶಿಸಿದಾಗ ಅಲ್ಲಿ ಬಳಸಲಾದ ಭಾಷೆಯ ಒರಟುತನ–'ಅಶ್ಲೀಲ' ಎಂಬಂಥ ಶಬ್ದಗಳನ್ನು ಕಂಡು ಸ್ತ್ರೀಯರೇ "ಹೆಂಗಸಾಗಿ ಇಂಥ ಮಾತೆಲ್ಲ ಬರೆಯಬಹುದೆ?" ಎಂದು ಆಕ್ಷೇಪಿಸಿದ್ದನ್ನು ಹೇಳುತ್ತಾ ಅದೇ ನಾಟಕದ ಇನ್ನೊಂದು ಪ್ರದರ್ಶನಕ್ಕೆ ಸಂಭಾಷಣೆಯನ್ನು ತೆಗೆದುಕೊಂಡಾಗ ನೋಡಿದ ಮಹನೀಯರು 'ಸೈನಿಕರು ಇಂಥ ನವಿರಾದ ಸುಸಂಸ್ಕೃತ ಭಾಷೆ ಬಳಸುವುದಿಲ್ಲ–ಇದು ಕೃತಕ–ಅಸಹಜ' ಅಂದರಂತೆ, ಮತ್ತೆ ನಾಟಕ ಮೊದಲಿನ ರೀತಿಗೇ ಬರಬೇಕಾಯಿತು.

ಈ ವಿವರಗಳನ್ನು ಹೇಳುತ್ತಾ ಆಕೆ "ಹೀಗೆ ಮಹಿಳೆ ಬರೆದ ನಾಟಕ ಎಂಬ ಪ್ರತ್ಯೇಕತೆ ಏಕೆ? ಪುರುಷ ಬರೆದ ನಾಟಕ ಎಂದು ಹೇಳುತ್ತೇವೆಯೇ? ನಾಟಕ ಕೇವಲ 'ನಾಟಕ'ವಾಗಿ ಮಾತ್ರ ಗುರುತಿಸಲ್ಪಡಬೇಕು. ಪ್ರಾಯಶಃ ಹೆಂಗಸು ತನ್ನ ಬಾಲ್ಯ, ವಿದ್ಯಾಭ್ಯಾಸ, ಬೆಳವಣಿಗೆಯ

## ರಂಗಮಾಧ್ಯಮದಲ್ಲಿ ಲಿಂಗಭೇದವೇ ?

ಅಮೆರಿಕೆಯಲ್ಲಿ WPP ಎಂಬ ಸಂಸ್ಥೆ ತನ್ನ ಉತ್ತಮ ರಂಗ ಚಟುವಟಿಕೆಗಾಗಿ ಹೆಸರಾಗಿದೆ. ಬ್ರಾಡ್‌ವೇಗೆ ಪರ್ಯಾಯವಾಗಿ ಒಂದು ರಂಗಚಳುವಳಿಯನ್ನು ಗುರಿ ಮಾಡಿಕೊಂಡದ್ದು ಇದರ ಹುಟ್ಟಿಗೆ ಕಾರಣ. ಲಾಭ ದಾಯಕವಲ್ಲದಿದ್ದರೂ ಅಡ್ಡಿ ಇಲ್ಲ, ಒಂದು ಪರ್ಯಾಯ ರಂಗಭೂಮಿಯ ಅಗತ್ಯ ಇದೆ ಎಂಬ ಕಾರಣಕ್ಕಾಗಿಯೇ ಫೋರ್ಡ್ ಸಂಸ್ಥೆ ಮತ್ತು ಕೆಲವು ಇಂಥದೇ ಕಾರ್ಪೋರೇಷನ್‌ಗಳು ನೆರವಾದವು. 1960ರಲ್ಲಿ WPP (Women'sProject & Productions) ಉದಯಿಸಿತು. ಇಲ್ಲಿ ಸಂಘಟಿತರಾದ ಕೆಲ ಹೆಂಗಳೆಯರ ಸಾಹಸದ ಫಲವಾಗಿ ಸಂಸ್ಥೆ ವಿಶೇಷ ರೀತಿಯಲ್ಲಿ ಬೆಳೆಯಿತು. ನಾಟಕಕಾರ್ತಿಯರು ಅಧಿಕ ಸಂಖ್ಯೆಯಲ್ಲಿ ಇದ್ದಾರೆಂದು ಅರಿತು ಸಂಪರ್ಕಿಸಿದ್ದರ ಫಲವಾಗಿ ಈಗ ವರ್ಷಕ್ಕೆ ಕನಿಷ್ಟ ಒಂದು ಸಾವಿರ ಹಸ್ತಪ್ರತಿಯಾದರೂ ಬಂದು ಸೇರುತ್ತಿದೆಯಂತೆ।

ಯಾವುದೇ ರೀತಿಯ ಮಿತಿಗಳನ್ನು ಹಾಕಿಕೊಳ್ಳದೆ ಕೇವಲ • ರಂಗಭೂಮಿಯಾಗಿ ದುಡಿಯಬೇಕೆಂಬುದು ಆಶಯ, ಆದರೆ ಅನುದಾನ ನೀಡುತ್ತಿರುವ ಸಂಸ್ಥೆಗಳು (ಅಲ್ಪಸಂಖ್ಯಾತ) ಪ್ರತಿಭಾವಂತ ಮಹಿಳೆಯರ ಸಲುವಾಗಿ ಯೋಜನೆಗಳನ್ನು ರೂಪಿಸುವ ನಿಯಮ ಒಡ್ಡಿರುವುದರಿಂದ ಆ ದಿಕ್ಕಿನಲ್ಲಿ ಕೆಲಸ ಮಾಡಲೇಬೇಕಾಗುತ್ತದೆ. ಹೀಗಾಗಿ ಒಲ್ಲೆನೆಂದರೂ ಬಿಡದ ಸ್ತ್ರೀವಾದಿ (feminist) ಎಂಬ ಹಣೆಪಟ್ಟಿಯೂ ಬಿಡದೆ ಅಂಟಿಕೊಂಡಿದೆ.

'ಈ ಸಂಸ್ಥೆಯನ್ನು ಆರಂಭಿಸುವ ಮೊದಲು ಪ್ರಪಂಚದ ಪ್ರತಿಭಾವಂತ ಕಲಾವಿದೆಯರನೇಕರನ್ನು ಸಂಪರ್ಕಿಸಲಾಯಿತು. ಆ ಸಂದರ್ಭದಲ್ಲಿ ಖ್ಯಾತ ಸ್ಪ್ಯಾನಿಷ್ ನಟಿ–ನಿರ್ದೇಶಕಿ **ನೂರಿಯು ಎಸ್ಪರ್ಟ್** ತನ್ನ ಕಲಾಜೀವನ ಮತ್ತು ಕಂಪನಿಯ ಬಗ್ಗೆ ಹೇಳುತ್ತಾ-"ದೇಶದ ಇತಿಹಾಸದ ಹಾಗೆ ಮೊದಲು ಉಳಿವಿಗಾಗಿ ಹೋರಾಟ, ತನ್ನ ಅಸ್ತಿತ್ವಕ್ಕಾಗಿ, ಆನಂತರ ತನ್ನ ಆಶಯ ಉದ್ದೇಶಗಳನ್ನು ಸಾಧಿಸುವತ್ತ ಪ್ರಯತ್ನ", ಎಂದಿದ್ದರಂತೆ. WPP ಯ ಮುಖ್ಯ ನಾಟಕಕಾರ್ತಿ – ನಿರ್ದೇಶಕಿ ಮೈಲ್ಸ್ ಒಂದು ದಶಕದ ಅನಂತರ ಈ ಮಾತನ್ನು ಮೆಲುಕು ಹಾಕುತ್ತಾ, ಸಂಸ್ಥೆ ಬಲು ಶ್ರಮದಿಂದ ಉಳಿದುಕೊಂಡಿತು. ಇದೀಗ ಎರಡನೆಯ ಹಂತ ಐಡೆಂಟಿಟಿಗಾಗಿ ಹೋರಾಟವೇ ಆಗಬೇಕಿದೆ. ಇದೂ ಕೂಡ ನಿರಂತರವಾಗಿ ನಾಟಕ ಪ್ರದರ್ಶನ, ಪ್ರಗತಿಪರ ಕಾರ್ಯಕ್ರಮಗಳ ಯೋಜನೆಗಳನ್ನು ಹಾಕಿಕೊಂಡು ನಡೆಸಿದಾಗ ಅವು ತನ್ನಂತೆ ಒದಗಿ ಬರುತ್ತವೆ. ಈ ಸಂದರ್ಭ ಮೈಲ್ಸ್ ಅವರು ಟಾಮ್‌ಸ್ಟಾಫರ್ಡ್ ರ 'ದಿ ರಿಯಲ್ ಥಿಂಗ್' ನಲ್ಲಿಯ "Plays that nulge the world a little" ಎಂಬ ವಾಕ್ಯವನ್ನು ನೆನೆದು ಸಮರ್ಥಿಸಿಕೊಳ್ಳುತ್ತಾರೆ. ಅವರ ಗುರಿಯೂ ಇತ್ತಲೇ ಇದೆ. ।

---

○ ವಿಜಯಾ

---

ತಮ್ಮ ಆಶಯ ಕಲೆಗೆ ಎಂದೂ ಲಿಂಗಭೇದ ಬೇಡ, ಅದಕ್ಕೆ 'ಮಹಿಳೆ' ಎಂಬ ಹಣೆ ಪಟ್ಟಿಯಡಿ ಮಿತಿಗಳನ್ನು ಹಾಕಿಕೊಳ್ಳಬಾರದು ಎಂಬುದಾಗಿದ್ದರೂ ಒಂದು ಸಂಸ್ಥೆ ತಮಗೆ ಇಂಥ ಅಭಿವೃದ್ಧಿ ಕಾರ್ಯದ ಸಲುವಾಗೇ ನೆರವು ನೀಡಿರುವಾಗ ಅತ್ತ ಗಮನ ಹರಿಸಬೇಕಾಗುತ್ತದೆ. 'ಸ್ತ್ರೀವಾದಿ' ಎಂಬ ಮುದ್ರೆಯಡಿ ಮಾತ್ರ ಗುರುತಿಸುವ ಪ್ರವೃತ್ತಿಯ ಬಗ್ಗೆ ಆಕ್ಷೇಪವೇನಿಲ್ಲ. ಆದರೆ ಅದಕ್ಕೇ ಆದಾಗ ಅಸ್ವಸ್ಥಳಾಗುತ್ತೇನೆ. ನಾಟಕ ಕಲೆ ಸಾಹಿತ್ಯ–ಸೌಂದರ್ಯಗಳ ಸಂಯೋಗದಿಂದ ಬರುವಂಥದ್ದು. ಸಾಮಾಜಿಕ ಬದ್ಧತೆ ಇರುವ, ಒಂದು ಕಲೆಯೂ ಆಗಿ ಮುಖ್ಯವಾದದ್ದಾದರೆ ಅಲ್ಲಿ ಸ್ತ್ರೀ–ಪುರುಷ ಭೇದ ಇಲ್ಲದೆ ಕೃತಿಯನ್ನಷ್ಟೇ ಗಮನಿಸಬೇಕಾದ್ದು ಅಗತ್ಯ. ಆದರೆ ಹಾಗೆ ಇನ್ನೂ ಒಂದು ಸ್ಥಾನವನ್ನು ನಾವು ತಲುಪಲಾಗದ್ದಕ್ಕೆ ನಾವು ಮಹಿಳಾ ಪ್ರಗತಿಯ ಸಲುವಾಗೇ ಯೋಜನೆಗಳನ್ನು ರೂಪಿಸಬೇಕಾದ ಚೌಕಟ್ಟು ಕಾರಣ. ಇದು ಬಹುಕಾಲ

ಬೇರೆ ಬೇರೆ ಹಂತಗಳು ಇಲ್ಲೆಲ್ಲ ಒಂದು ದಪ್ಪ ತೆರೆಯ ಹಿಂದೆ ತಾನು ಹೆಣ್ಣು ತನ್ನ ನಡವಳಿಕೆ ಹೀಗೆ ಇರಬೇಕು ಎಂಬ ಒತ್ತಡದಲ್ಲಿ ಬೆಳೆಯುತ್ತಾಳೆ. ಹಾಗಾಗಿ ಆಕೆಯ ದೃಷ್ಟಿಕೋನಗಳಿಗೆ ಮಿತಿಗಳು ಏರ್ಪಡುತ್ತವೆ. ಇದನ್ನು ಕಿತ್ತು ಹೊರಬರದವರಾದರೂ ವಿಶಾಲವಾಗಿ ಯೋಚಿಸ ಬೇಕು–ಇತರರನ್ನು ಆ ದಿಕ್ಕಿನಲ್ಲಿ ಯೋಚಿಸುವಂತೆ ಮಾಡ ಬೇಕು. ಹಾಗೆ ಕಟ್ಟುಪಾಡಿನಲ್ಲಿ ಬೆಳೆದ ಹೆಂಗಸರಿಗೆ ಸ್ತ್ರೀಯರ ಮನಸ್ಸನ್ನು ಬಿಚ್ಚಿಡಲೂ ಆಗದಷ್ಟು ಸಂಕೋಚ ಎಂದಮೇಲೆ ಪುರುಷರ ದೃಷ್ಟಿಕೋನವು ದೂರದ ಮಾತಾ ಯಿತು. ಆದರೆ ಹೀಗೆ ಒಂದು ಚೌಕಟ್ಟನ್ನು ಹಾಕಿಕೊಳ್ಳು ವುದು ಯಾವುದೇ ಸೃಜನಶೀಲತೆ ತನ್ನ ಸುತ್ತ ತಾನೇ ಅಭೇದ್ಯವಾದ ಬೇಲಿಯೊಂದನ್ನು ಹಾಕಿಕೊಂಡಂತೆ. ಇದು ಸಂಭವಿಸಬಾರದು. ಹಾಗಿದ್ದಲ್ಲಿ ಕಿತ್ತು ಹಾಕಬೇಕೆಂಬುದು ಆಕೆಯ ಆಶಯ. ಮೈಲ್ಸ್ ಮತ್ತು ಆಕೆಯ ಸಹೋ ದ್ಯೋಗಿ ಗೆಳತಿ ಮ್ಯೂಲರ್ ಸಂದರ್ಶನವೊಂದರಲ್ಲಿ ಮೇಲೆ ಹೇಳಲಾದ ಅಭಿಪ್ರಾಯಗಳಿಗೆ ಬರುತ್ತಾರೆ.

ಈ ಹಿನ್ನೆಲೆಯಲ್ಲಿ ಭಾರತದ, ನಮಗೆ ಹತ್ತಿರವಾದ– ಕನ್ನಡದ ಸಂದರ್ಭವನ್ನು ಹೋಲಿಸಿದರೆ ಸ್ವಲ್ಪ ಮಟ್ಟಿಗೆ ನಾವು ಭಿನ್ನರು, ಸ್ವತಂತ್ರರು ಎನ್ನಿಸುತ್ತದೆ.

ರಂಗಭೂಮಿಯ ಸ್ಥಿತಿಯೇ ಮುಂದೇನು ಎಂಬಂತಿರು ವಾಗ ಪರ್ಯಾಯ ರಂಗಭೂಮಿಯ ಅಗತ್ಯವಂತೂ ದೂರವೇ ಉಳಿಯಿತು. ಇದಕ್ಕಾಗಿ ಸಹಾಯಧನ ನೀಡುವ ಸಂಸ್ಥೆಗಳು ಈ ದೇಶದಲ್ಲಿ ಇಲ್ಲ. ನೀನಾಸಂ ಅಂಥ ಸಂಸ್ಥೆ ಫೋರ್ಡ್ ನೆರವು ಪಡೆದದ್ದು, ಟೀಕೆಗಳಿಗೆ ಒಳಗಾಗಿದ್ದು ಮತ್ತು ಈಚೆಗೆ ಅದು ಕಟ್ಟುಗಳನ್ನು ಬಿಡಿಸಿಕೊಂಡು ಸ್ವತಂತ್ರವಾದದ್ದು ಗೊತ್ತೇ ಇದೆ. ಇನ್ನು ನಾಟಕಕಾರ್ತಿ ಯರು ನಿರ್ದೇಶಕಿಯರು ನಮ್ಮಲ್ಲಿ ತುಂಬಾ ಕಡಿಮೆ. (ಧಾರಾಳವಾಗಿ ರೇಡಿಯೋ ನಾಟಕ ಬರೆದವರು ಇರ ಬಹುದು) ಬಿ.ಜೆ. ಸುವರ್ಣ ಕೆಲವು ಅನುವಾದಗಳನ್ನು ಮಾಡಿ ಸಮರ್ಥವಾಗಿ ಪ್ರಯೋಗಿಸಿದ್ದರು. ಆಕೆಯ ಅನಾರೋಗ್ಯ ರಂಗಭೂಮಿಯಿಂದ ಒಬ್ಬ ನಿರ್ದೇಶಕಿ ಯನ್ನು ಕಿತ್ತುಕೊಂಡಿತು. ಆಕೆ ಈಗ ತಟಸ್ಥವಾಗಿದ್ದಾರೆ. ಅಭಿನೇತ್ರಿಯರ ಅಭಾವ ಇದೆ, ಆದರೆ ಮೈಲ್ಸ್ ಭಯ ಪಟ್ಟು ಪಲಾಯನ ಹೇಳಿ ಹಿನ್ನೆಲೆಗೆ ಸರಿದ ಹಾಗೆ ಬದುಕಿನ ನಿಯಂತ್ರಣ ತಪ್ಪುವ ಅಪಾಯ. ಕಾಣಲಿಲ್ಲ. ಇದ್ದರೆ ಅದು ಎಲ್ಲ ಕ್ಷೇತ್ರದಲ್ಲೂ ಇರುತ್ತದೆ; ಅವರವರು ಬಿಡಿಸಿ ಕೊಳ್ಳುವ ಸ್ಥಿತಿಯನ್ನು ಅವಲಂಬಿಸಿದೆ.

ನಮ್ಮಲ್ಲಿ ಮಹಿಳೆಯೊಬ್ಬರು ಈ ಕಾರ್ಯ ಮಾಡಿದ್ದಾರೆ ಎಂದರೆ ವಿಶೇಷವಾಗಿ ಪರಿಗಣಿಸುವ ಪ್ರವೃತ್ತಿಯೂ ಒಂದಿದೆ. ಈ ಕಾರಣಕ್ಕಾಗಿ ಕೆಲವರು ಬೊಂಬೆಗಳ ಹಾಗೆ ಮುಂದೆ ಬಂದು ಹಿಂದಿನಿಂದ ಪುರುಷರೇ ಕಾರ್ಯ ನಿರ್ವ ಹಿಸಿ ಪ್ರಚಾರ ಗಿಟ್ಟಿಸಿದ ಒಂದೆರಡು ಉದಾಹರಣೆಗಳಿವೆ. ಇವೆಲ್ಲ ಕೇವಲ ಶೋಕಿಯ ಮಾತು. ಗಂಭೀರವಾಗಿ ರಂಗಮಾಧ್ಯಮದಲ್ಲಿ ಕೆಲಸ ಮಾಡಿದವರನ್ನು ಕುರಿತು ಹೇಳಬಹುದಾದರೆ ಕೆಲವು ಮುಖ್ಯರನ್ನು ಗುರುತಿಸುತ್ತಾ ಅವರ ಅನುಭವ ಕುರಿತು ಮಾತಾಡುವುದು ಮೈಲ್ಸ್ ಅವರ ಅಭಿಪ್ರಾಯಕ್ಕೆ ನಮ್ಮ ಸಂದರ್ಭದಲ್ಲಿ ಏನು ಉತ್ತರ ಎಂದು ಯೋಚಿಸಲು ನೆರವಾದೀತು.

ಪ್ರೇಮಾಕಾರಂತರು ರಂಗಪ್ರವೇಶ ಮಾಡಿದಾಗ ಅವರ ಯಶಸ್ಸಿನ ಹಿಂದೆ ಬಿ.ವಿ. ಕಾರಂತರು ಆಕೆಯ ಪತಿ ಎಂಬ ಕಾರಣಗಳನ್ನು ಒಡ್ಡಿದವರುಂಟು. ಇಂಥ ಸಂದೇಹಗಳು ಏಳುವುದು, ಸ್ವಭಾವ ಸಹಜ. ಆದರೆ ಪ್ರೇಮಾ ಬಹು ಬೇಗ ತಮ್ಮತನವನ್ನು ಎತ್ತಿ ಹಿಡಿಯುವಂಥ ಕೆಲಸಮಾಡಿ ತೋರಿಸಿದರು. ಆಕೆಯ ಸ್ವತಂತ್ರ ಅಸ್ತಿತ್ವಕ್ಕೆ ಬೆಲೆ ತನ್ನಂತೆ ಸಾಗಿಬಂತು. ಪ್ರೇಮಾ ಅಂಥವರು ರಂಗ ಭೂಮಿ ಯಿಂದ ವಿಮುಖರಾಗಲು ಕಾರಣವೆಂದರೆ ನಮ್ಮಲ್ಲಿರುವ ತಂಡಗಳು, ಕಲಾವಿದರು, ಹಣದ ಕೊರತೆ. ಆಕೆ ಮಹಿಳೆ ಎಂಬ ಕಾರಣಕ್ಕೆ ತಿರಸ್ಕೃತರಾಗಿ ಎಂದೂ ಹಿಂದೆ ಸರಿದಿಲ್ಲ.

ಬಿ. ಜಯಶ್ರೀ ಅಂಥ ನಿರ್ದೇಶಕಿಗೆ ನಾಟಕ ರಕ್ತಗತ ವಾಗಿ ಬಂದದ್ದು. ಆಕೆಯ ಗುಬ್ಬಿ ಕಂಪನಿಯ ಅನುಭವದ ಜತೆಗೆ ಎನ್.ಎಸ್.ಡಿ. ಯಲ್ಲಿ ಕೆಲಕಾಲ ಕಲಿತದ್ದು ತಂದು ಕೊಟ್ಟ ಶಿಸ್ತು ಸೇರಿ ಆಕೆ ಉತ್ತಮ ಅಭಿನೇತ್ರಿ–ನಿರ್ದೇಶಕಿ ಸಹ ಆಗಿದ್ದಾರೆ. ಆಕೆಯ ಪ್ರಕಾರ ಆರಂಭದಲ್ಲಿ 'ಘಾಶೀರಾಂ ಕೊತ್ವಾಲ್' ನಾಟಕವನ್ನು ನಿರ್ದೇಶಿಸಲು ಹೊರಟಾಗ ಕೊಂಚ ತಡೆಗಳಾದವು. "ಅಂಥ ನಾಟಕ ಆಕೆಯ ಕೈಲೇಕೆ ಕೊಡಬೇಕು?" ಎಂಬ ಅನುಮಾನ, ಅಷ್ಟರ ಮಟ್ಟಿಗೆ ಇತ್ತು. ಒಬ್ಬ ನಿರ್ದೇಶಕಿಯೂ ಇರದ ಆ ಸಂದರ್ಭಕ್ಕೆ ಎತ್ತಿರಬಹುದಾದ ಆಕ್ಷೇಪಕ್ಕೆ ಗೋಣಗ ಬೇಕಿಲ್ಲ. ಆದರೆ ಜಯಶ್ರೀ ಅವರು ನೀಡಿದ ಪ್ರಯೋಗ ಇನ್ನೂ ಬೆಂಗಳೂರಿನ ಪ್ರೇಕ್ಷಕನ ಮನಸ್ಸಿನಿಂದ ಮಾಸಿ ಹೋಗಿಲ್ಲ.

ಜಯಶ್ರೀ ಅಂಥವರಿಗೆ ನಾಟಕ ಸ್ತ್ರೀ ಸಮಸ್ಯೆಯನ್ನು ಕುರಿತದ್ದೇ ಆಗಿರಬೇಕೆಂಬ ಹಟವಿಲ್ಲ. ಅಲ್ಲಿ ನಿರ್ದೇಶಕಿ-ನಟಿ ಆಗಿ ಆಕೆ ತನಗೆ ಸವಾಲಾಗುವಂಥ ನಾಟಕವನ್ನು ಮಾತ್ರ ಹುಡುಕುತ್ತಾರೆ. ಇವತ್ತಿಗೂ ಜಯಶ್ರೀ ಅಭಿನಯಿಸಿದ್ದ 'ತಾಯಿ' ನಾಟಕದ ತಾಯಿಯ ಪಾತ್ರ ಇಲ್ಲಿ ಸಾಧ್ಯವಿದ್ದಿದ್ದಾದರೆ ಆಸ್ಕರ್‌ನಂಥ ಪ್ರಶಸ್ತಿಗೆ ಯೋಗ್ಯ ಎಂಬ ಮಾತನ್ನು ಎಲ್ಲ ವಿಮರ್ಶಕರೂ ಒಪ್ಪುತ್ತಾರೆ. ಜಯಶ್ರೀ ನಿರ್ದೇಶಿಸಿದ 'ನಹಿ ನಹಿ ರಕ್ಷತಿ' ಎಂಬ ನಾಟಕ ಕೊಂಚ ವಿವಾದಕ್ಕೆ ಒಳಗಾಯಿತು. ಅಲ್ಲಿ ನಾಟಕಕಾರ ನಾ.ಕೃ. ಸತ್ಯನಾರಾಯಣರು ವಸ್ತುವನ್ನು ಪ್ರತಿಪಾದಿಸಿದ ರೀತಿಯ ಬಗ್ಗೆ ಹೆಚ್ಚು ಆಕ್ಷೇಪ ಇತ್ತು. ಮತ್ತು ಅಂಥ ನಾಟಕ ಆಯ್ದುಕೊಂಡುದರ ಬಗ್ಗೆ ಜಯಶ್ರೀ ಆಕ್ಷೇಪಣೆಗೆ ಒಳಗಾದರು. ನಾಟಕದ ಆಶಯ ಒಂದು ಸ್ತರದಲ್ಲಿ ಆರ್.ಎಸ್.ಎಸ್. ಧೋರಣೆಯದು ,ಎಂಬುದು ಇದಕ್ಕೆ ಕಾರಣ ಎನ್ನಿಸುತ್ತದೆ.

ಜಯಶ್ರೀ ಮಹಿಳೆ ಎಂಬ ಕಾರಣಕ್ಕೆ ಹೀಗಾಯಿತು ಎಂದು ಭಾವಿಸಿದರೆ ತಪ್ಪಾಗುತ್ತದೆ. ಇಂಥ ಚರ್ಚೆ ಒಂದು ಕೃತಿಯ ಬಗ್ಗೆ ನಡೆಯುವುದೇ ಅದನ್ನು ಗಂಭೀರವಾಗಿ ಪರಿಗಣಿಸಿದ್ದಕ್ಕೆ ಸಾಕ್ಷಿ.

ಜಯಶ್ರೀ, ಪ್ರತಿಭಾನಂದಕುಮಾರ್ ಅವರ ಜತೆಗೂಡಿ ರಚಿಸಿ, ನಿರ್ದೇಶಿಸಿದ 'ಕರಿಮಾಯಿ' ಕೂಡ ಬಹುವಾದ ಚರ್ಚೆಗೆ ಒಳಗಾಯಿತು. ಜಯಶ್ರೀ ಅಂಥ ಕಲಾವಿದೆಗೆ ಸಿಗಬೇಕಾದ ಮನ್ನಣೆ ಸಿಕ್ಕಿಲ್ಲ ಎಂಬ ಬಗ್ಗೆ ಎಲ್ಲರೂ ಒಪ್ಪುತ್ತಾರೆ. ಆದರೆ ಅದಕ್ಕೆಲ್ಲ ಆಕೆ ಮಹಿಳೆ ಎಂಬ ಕಾರಣ ಎಂದರೆ ತಪ್ಪಾದೀತು. ಹೀಗೆ ಇನ್ನೂ ಅನೇಕರಿಗೆ ಅವರ ಯೋಗ್ಯತೆಗೆ ತಕ್ಕ ಮಾನ್ಯತೆ ಸಿಕ್ಕಿಲ್ಲ ಎಂಬುದನ್ನು ಒಪ್ಪಿಕೊಳ್ಳುವುದಾದರೆ ಜಯಶ್ರೀಯೂ ಅದೇ ಸಾಲಿನವರು. ನಾಟಕವೇ ಆಕೆಯ ಬದುಕು-ಅಲ್ಲಿ ಹವ್ಯಾಸ, ಖಯಾಲಿಗಳ ಮಾತಿಲ್ಲ.

ಎಸ್. ಮಾಲತಿ ನಮ್ಮ ನಡುವೆ ಇರುವ ಪ್ರಜ್ಞಾವಂತೆ. ಆಕೆ ನಾಟಕವನ್ನು ಅದರ ದೃಶ್ಯ ಸಾಧ್ಯತೆಗಾಗಿ ಮಾತ್ರ ಆಯ್ದುಕೊಳ್ಳುವವರಲ್ಲ. ಇವರಿಗೆ ವಸ್ತು ಪ್ರತಿಪಾದನೆ ಬಹಳ ಮುಖ್ಯ. ಅಂತೆ ಆಕೆಯ ಪ್ರತಿಯೊಂದು ಕೆಲಸವನ್ನು ತುಂಬ ಗಂಭೀರವಾಗಿ ಪರಿಗಣಿಸಲಾಗುತ್ತದೆ. ಸಮುದಾಯ ಜಾತಾದಲ್ಲಿ ಆಕೆಯ ದಿಟ್ಟತನ - ಸಮಸ್ಯೆಗಳನ್ನು ಎದುರಿಸಿದ ಬಗೆ ಎಲ್ಲರೂ ಬಲ್ಲರು. ಮಾಲತಿ ಅವರು ಹೆಚ್.ಎಸ್. ಶಿವಪ್ರಕಾಶ್‌ರು ಬರೆದ 'ಸಮಗಾರ ಭೀಮವ್ವ' ಕವಿತೆಯನ್ನು ದೃಶ್ಯೀಕರಿಸಿದ್ದು, ಅಲ್ಲಿ ನೋಟಕರಿಗಾದ ಅನುಭವ ಮರೆಯಲಾಗದಷ್ಟು ಗಾಢವಾದದ್ದು. ಮಾಲತಿ 'ಹುಲಿಯ ನೆರಳು'ನಲ್ಲಿ ಅಭಿನಯಿಸಿದಾಗಲೂ ಇಂಥದೇ ಪರಿಣಾಮ ಆಗಿತ್ತು. ಒಂದು ಸಾಮಾಜಿಕ ಜವಾಬ್ದಾರಿ - ಬದ್ಧತೆ ಇಟ್ಟುಕೊಂಡು ಕೆಲಸ ಮಾಡುತ್ತಾರೆ, ಮಾಲತಿ. ಆಕೆ ನಿರ್ದೇಶಿಸಿದ ಡಾಲ್ಸ್ ಹೌಸ್‌ನ ಅನುವಾದಿತ ನಾಟಕ ಕೊಂಚ ವಿವಾದಗ್ರಸ್ತವಾಯಿತು. ಇಲ್ಲಿಯ ನಾಯಕಿ ಪತಿಯನ್ನು ವಿರೋಧಿಸುವ ರೀತಿ ಬೇರೆ. ಮಾಲತಿಯ ಪ್ರಕಾರ ಭಾರತೀಯ ಸಂದರ್ಭದ ನಾರಿಯ ಪ್ರತಿಕ್ರಿಯೆಯನ್ನು ನೋರಾಳ ಹಾಗೆ ಚಿತ್ರಿಸಿದರೆ ಅಸಹಜವಾಗುತ್ತದೆ. ಆದರೆ ನೋರಾ ಹಾಕಿದ ಬಾಗಿಲು ಪ್ರಪಂಚವನ್ನೇ ಅಲುಗಾಡಿಸಿತು ಎಂಬ ಹೇಳಿಕೆ-ಅಲ್ಲಿಯ ಧ್ವನಿ ನಾಟಕದ ಮಾರ್ಪಾಡಿನಲ್ಲಿ ಬರಲಿಲ್ಲ, ಎಂಬ ಕಾರಣಕ್ಕೆ ವಿವಾದಕ್ಕೊಳಗಾದವು. ಮಾಲತಿ ಅವರ ನಿಲುವು ತಪ್ಪು ಎನ್ನುವುದಲ್ಲ, ಹಾಗೆ ಅದನ್ನು ಸ್ವೀಕರಿಸಲು ಇಲ್ಲಿನ ಮನಸ್ಸುಗಳು ಸಿದ್ಧವಿರಲಿಲ್ಲ ಎನ್ನುವುದು. ಆದರೆ ಅದು ಮಾಲತಿ ಸ್ತ್ರೀ ಎಂಬ ಕಾರಣಕ್ಕಾಗಿಯೇ ಹಾಗಾಯಿತು ಎಂಬುದು ಕೂಡ ಅಷ್ಟೇ ಅಸಹಜ - ತಪ್ಪು ಅಭಿಪ್ರಾಯ ಎನ್ನಿಸುತ್ತದೆ.

ಬೆಂಗಳೂರಿನ ಕೆಲವು ವಿದೇಶೀ ಅನುದಾನ ಪಡೆದ ಸಂಸ್ಥೆಗಳು ಮಹಿಳೆಯರ ಸಮಸ್ಯೆಗಳನ್ನು ಕುರಿತು ನಾಟಕ ರಚಿಸಿ ಆಡಿದ ಬೀದಿ ನಾಟಕಗಳು-ಮಾಲತಿರಾವ್ ತಾವೇ ಬರೆದು ಆಡಿಸಿದ ಬೀದಿ ನಾಟಕ, ಇಂಥ ಕೆಲವು ಉದಾಹರಣೆಗಳನ್ನು ಬಿಟ್ಟರೆ ಹಾಗೆ ಸ್ತ್ರೀಪರ ಚಳುವಳಿಗಾಗಿಯೇ ರಂಗಭೂಮಿಯೊಳಗೆ ತಂಡಗಳು ನಮ್ಮಲ್ಲಿಲ್ಲ. ನಮ್ಮ ಯಾವ ನಾಟಕಕಾರ್ತಿ-ನಿರ್ದೇಶಕಿಯೂ ಅಂಥ ಕಾರಣಕ್ಕಾಗಿ ರಂಗಭೂಮಿಯಲ್ಲಿ ತೊಡಗಿಯೂ ಇಲ್ಲ. ಮಾಲತಿ ಅವರ ನಾಟಕದ ಬಗ್ಗೆ ಎದ್ದ ವಿವಾದಕ್ಕೆ ಆಕೆ 'ಅಚಲ'ದಲ್ಲಿ ಉತ್ತರಿಸಿದ್ದರು. ಅಲ್ಲೂ ಗಂಭೀರವಾಗಿ ಪರಿಗಣಿಸಿದ್ದರಿಂದಲೇ ಚರ್ಚೆ ಸಾಧ್ಯವಾಯಿತು ಎಂಬುದು ನನ್ನ ಅಭಿಪ್ರಾಯ.

ಈ ದೃಷ್ಟಿಯಿಂದಲೇ ವೈಲ್ಸ್ ಹೇಳುವ "ಹೆಣ್ಣಾಗಲೀ ಗಂಡಾಗಲೀ ತಾನು ಬರೆಯಬೇಕೆಂದುಕೊಂಡ ಯಾವುದೇ ವಿಷಯದ ಬಗ್ಗೆ ನಿರ್ಭಿಡೆಯಿಂದ ಹೇಳಬೇಕು-ಬೇಕಾದ ವಿಷಯ ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ತೋರಿಕೊಳ್ಳ

ಬೇಕಿಲ್ಲ; ಸೀಮಿತ ಗೊಳಿಸಬೇಕಿಲ್ಲ. ಒಟ್ಟು ಉದ್ದೇಶ ಮಾನವಪತ್ವದ್ದಾಗಿದೆ," ಎಂಬ ಮಾತು ಮಾತ್ರ ಸತ್ಯವಾಗಿ ತೋರುತ್ತದೆ. ನಮ್ಮ ಬರಹಗಾರ್ತಿಯರಿಗೆ ಅಂಥ ಮಿತಿಗಳು ಇವೆ ಎಂದು ಅನಿಸುತ್ತಿಲ್ಲ. ನಮ್ಮಲ್ಲಿ ಮಹಿಳೆ ತನ್ನನ್ನು ಕುರಿತು ಮಾತ್ರ ಬರೆಯಬೇಕೆಂಬ ನಿಯಮ ವನ್ನು ಯಾರೂ ಹಾಕಿಲ್ಲ.

ಈ ಹೊತ್ತು ಸ್ತ್ರೀವಾದಿ ವಿಮರ್ಶೆ ಎಂಬ ಮಾತು ಕೇಳಿ ಬರುತ್ತಿದೆ. ಈ ಮುನ್ನ ಇಂಥ ವಿಚಾರಗಳು ಇರಲಿಲ್ಲ ವೆಂದೇನಲ್ಲ. ಅದಕ್ಕೊಂದು ಸೈದ್ಧಾಂತಿಕ ಚೌಕಟ್ಟು ಕೊಡುವ ದೃಷ್ಟಿಯಿಂದ ಕೆಲವು ಗಂಭೀರವಾದ ಚಿಂತನೆ ಗಳು ನಡೆದಿದೆ.

ನನ್ನ ಅನುಭವದ ಪರಿಮಿತಿಯಲ್ಲಿ ಹೇಳುವುದಾದರೆ ಬೇರೆ ದೇಶಗಳಿಗೆ ಹೋಲಿಸಿದರೆ ನಮ್ಮಲ್ಲಿ ಈ ಹೊತ್ತು ಆ ಪ್ರಮಾಣದಲ್ಲಿ ಸ್ತ್ರೀಯರು ಹಿಂದೆ ಸರಿಯಬೇಕಾದ ಅನಿವಾರ್ಯ ಇದ್ದಂತಿಲ್ಲ. ಗಮನಕ್ಕೆ ಬಾರದೆ ಉಳಿದ, ಚರ್ಚಿತವಾಗದ ಸಂದರ್ಭಗಳಿರಬಹುದು. ಅದಕ್ಕೆ ಅವರದೇ ಆದ ಕಾರಣಗಳು ಇರಬಹುದು. ಆದರೆ ನಾವು ಒಂದು ಹೋರಾಟ ಮಾಡುವಂಥ ಸನ್ನಿವೇಶ ಬರಹ– ಕಲೆಯ ಸಂದರ್ಭದಲ್ಲಿ ಇರುವುದಕ್ಕಿಂತ ಹೆಚ್ಚಾಗಿ ಸಾಮಾಜಿಕವಾಗಿ ಆಕೆಯನ್ನು ಬಹುಬೇಗ ಕುಗ್ಗಿ ಹೋಗು ವಂತೆ ಮಾಡುವ ನೈತಿಕ ಬೆಲೆಯನ್ನು ಪ್ರಶ್ನಿಸುವ– ಸಂದೇಹಿಸುವ – ಗೇಲಿ ಎಬ್ಬಿಸುವ ಪ್ರವೃತ್ತಿಯಿನ್ನು ಕಡಿಮೆಯಾಗಿಲ್ಲ. ಇದು ಮುಂಚೂಣಿಯಲ್ಲಿರುವ ಕಲಾವಿದೆಯರನೇಕರು ಎದುರಿಸುತ್ತಿರುವ ಸಮಸ್ಯೆ. ಖಾಸಗೀ ಬದುಕನ್ನು ಬಹಿರಂಗವಾಗಿ ಚರ್ಚಿಸುವುದರಲ್ಲಿ ಖುಷಿ ತೆಗೆದುಕೊಳ್ಳುವ ಬುದ್ಧಿ ಜೀವಿಗಳೂ ಇದ್ದಾರೆ.

ಬಹು ಮೆಚ್ಚು–ಗೌರವ ಪಡೆದುಕೊಂಡ ಬರಹಗಾರ್ತಿ ಯರಿಗೂ ಈ ಒಂದು ಹಂತದ ಖಿನ್ನತೆ ತಪ್ಪಿದಂತಿಲ್ಲ. ಇಲ್ಲೆಲ್ಲ ಈ ಮಾತುಗಳನ್ನು ಲೆಕ್ಕಿಸದೆ ನಿರ್ಭಿಡೆಯಿಂದ ಬರೆದು ಮುಂದಾದವರು ಹೆಚ್ಚು. ಅಮೃತಾಪ್ರೀತಮ್ ಅಂಥ ಬರಹಗಾರ್ತಿಯ ಖಾಸಗಿ ಬದುಕಿನ ಬಗ್ಗೆ ಅನೇಕ ಮಾತುಗಳಿದ್ದವು. ಒಬ್ಬ ಸಾಹಿತಿ ಆಕೆಗೆ ಪ್ರಶಸ್ತಿಗಳು ಬರದ ಹಾಗೆ ನೋಡಿಕೊಳ್ಳುತ್ತೇವೆಂದು ಸವಾಲು ಹಾಕಿದ್ದ ಪ್ರಾಯಶಃ ಆತ ಆಕೆಯಿಂದ ಪ್ರಣಯ ವಂಚಿತನಾಗಿ ತನ್ನ ನಿರಾಶೆಗೆ ಈ ಸೇಡಿನ ಮೂಲಕ ತೃಪ್ತಿ ಪಟ್ಟುಕೊಳ್ಳುವ ಉಪಾಯ ಹೂಡಿರಬಹುದು. ಸಾಮಾನ್ಯವಾಗಿ ಹೆಣ್ಣಿನ ಖಾಸಗಿ ಬದುಕಿನ ಬಗ್ಗೆ ವಿಚಿತ್ರವಾಗಿ ಟೀಕಿಸುವ ಕೆಲವರ ಅಬ್ಸೆಷನ್ ಇರುವುದೇ ಇಂಥಲ್ಲಿ. ಒಂದೋ ಪೌರುಷದ ಮಿತಿಗಳೋ ಅಥವಾ ಅಪೇಕ್ಷಿಸಿ ತಿರಸ್ಕೃತರಾದವರೋ ಆಗಿರುತ್ತಾರೆ. ಮೂಲ ಇಲ್ಲಿದ್ದು ಮಾತುಗಳು ವಿಚಿತ್ರ ವಾಗಿ ವ್ಯಾಪಿಸಿಕೊಳ್ಳುತ್ತ ರೋಚಕವಾದುದರಿಂದ ಉಳಿದು ಬೆಳೆಯುವಂಥಹುದು. ಇಂಥ ಮಾತಿನಿಂದ ಹೊರ ತಾದ ಬರಹಗಾರ್ತಿಯರು ನಮ್ಮಲ್ಲಿ ಬೆರಳೆಣಿಕೆಯಷ್ಟು. ಅಂತೇ ರಂಗಭೂಮಿಯ ಗೆಳತಿಯರಿಗೂ ಈ ಮಾತು ಹೊರತಲ್ಲ. ಅಮೃತಾಪ್ರೀತಮ್ ಅಂಥವರು ಹಾಗೆ ಸವಾಲು ಹಾಕಿದ 'ಖಲ'ಗಳಿಗೆ ಪಾಠ ಕಲಿಸಿದ ಬಗ್ಗೆ ಎಂದರೆ ಮೀರಿಸುವಂಥ ಕೃತಿ ರಚನೆ ಮಾಡಿದ್ದು. ಸಮಾನವಾಗಿ ಚರ್ಚಿತವಾಗುವಂಥ ವಿಷಯಗಳ ಪ್ರತಿಪಾದನೆಗೆ ಹೊರ ಟದ್ದು. ಇಂಥ ಸವಾಲುಗಳನ್ನು ಸ್ವೀಕರಿಸುವ ಪ್ರವೃತ್ತಿ ಮುಖ್ಯವಾಗಿದೆ..

ನಾಟಕ ನಿರ್ದೇಶಕಿ ಪೈಲ್ಸ್ ಹೇಳುವ 'ನಾಟಕಕಾರ್ತಿ ಯೊಬ್ಬಳು ಸರ್ಕಾರ, ರಾಜಕಾರಣ' ವ್ಯಾಪಾರ, ಯುದ್ಧ ದಂಥ ಸಮಸ್ಯೆಗಳ ಬಗೆಗೂ ಬರೆಯಬಲ್ಲಳು. ಆದರೆ ಆಕೆಗೆ ಪುರುಷಾಧಿಕ್ಯ ಇರುವ ಪರಿಸರದಲ್ಲಿ ಸಹಜವಾಗಿ ಬದುಕುವ, ಗ್ರಹಿಸುವ ಅವಕಾಶಗಳು ಸಹಜವಾಗಿ ಸಿಗ ಬೇಕು–ಅಂತಾದಾಗ ದಿಟ್ಟ ಬರಹ ಸಾಧ್ಯ' ಎಂಬ ಮಾತು ಕೊಂಚಮಟ್ಟಿಗೆ ಸತ್ಯವಿರಬಹುದಾದರೂ ಈ ಸಹಜವಾದ ವರ್ತನೆಯನ್ನು ಯಾರಾದರೂ ಕೊಡಲೆಂದು ಕಾಯ ಬೇಕಿಲ್ಲ–ಅದು ನಾವೇ ಕಲ್ಪಿಸಿಕೊಳ್ಳಬೇಕಾದದ್ದು, ಎಂಬು ದನ್ನು ನೆನಪಿಡಬೇಕಲ್ಲವೇ?

ನಮ್ಮಲ್ಲಿ ಹೀಗೆ ವಿಭಿನ್ನವಾಗಿ ಹೊರಬಂದು ಬರೆಯ ಬಲ್ಲ ಲೇಖಕಿಯರ ಸಂಖ್ಯೆ ಕಡಿಮೆ. ಬಹಳಷ್ಟು ವೇಳೆ ಜನಪ್ರಿಯ ಕಾದಂಬರಿ ಬರೆಯುವುದಾಗಲೀ, ಅಲ್ಲೂ ವ್ಯಾಪಾರ ಲಾಭದತ್ತ ಗಮನವಾಗಲೀ ಆಗಿರುವುದೇ ಹೆಚ್ಚು. ಸರಿಕಂಡದ್ದನ್ನು ಹೇಳುವ ಕೆಲವೇ ಬರಹಗಾರ್ತಿ ಯರು ಕಲಾವಿದೆಯರು ಇಂಥ ಮಿತಿಗಳನ್ನು ಉಲ್ಲಂಘಿಸಿ ದ್ದಾರೆ. ಕಥೆ ಕಾದಂಬರಿಗಳ ಮೂಲಕ ಕೀರ್ತಿ, ಹಣ ಎರಡೂ ತರುತ್ತಿರುವ ಹೆಣ್ಣು ಮಕ್ಕಳ ಬಗ್ಗೆ ಈಗ ಅಪಾಯವನ್ನೇನೂ ಕಾಣದವರು ಇಂಥದೊಂದು ಬದ ಲಾವಣೆ ಆದಾಗ ಪ್ರತಿಕ್ರಿಯಿಸುವ ಬಗೆ ಬೇರೆಯೇ ಆಗುವ ಸಂಭವ ಇಲ್ಲದೆ ಇಲ್ಲ. ಈ ಕಾರಣಕ್ಕಾಗಿ ಪೈಲ್ಸ್ ಹೇಳುವ ಬರಹಗಾರ್ತಿಯರ ಸಂಖ್ಯೆ ಹೆಚ್ಚಿದರೆ ಅಲ್ಪ

20ನೇ ಪುಟಕ್ಕೆ

# ಸ್ಪಂದನ

## ಧೂಮಪಾನದಿಂದ ಸಮಾನತೆ ?

—ಡಾ|| ಜಿ. ರಾಮಕೃಷ್ಣ

ನಮ್ಮ ಅನೇಕ ವಾರ ಮತ್ತು ಮಾಸ ಪತ್ರಿಕೆಗಳಲ್ಲಿ ಇತ್ತೀಚೆಗೆ ಹಲವು ಪುಟಗಳನ್ನು ವಿನಾಕಾರಣ ಅಪವ್ಯಯಗೊಳಿಸಿರುವ ಒಂದು ವಿಷಯ ಮಹಿಳೆಯರ ಸ್ವಾತಂತ್ರ್ಯಕ್ಕಾಗಿ ವಿಶಿಷ್ಟವಾದ ಧೂಮಪಾನಕ್ಕೆ ಸಂಬಂಧಿಸಿದ್ದಾಗಿದೆ. ವಿಶ್ವ ಆರೋಗ್ಯ ಸಂಸ್ಥೆಯು ಕೈಗೆತ್ತಿಕೊಂಡಿರುವ ಒಂದು ಘೋಷಣೆಯು ಇಡೀ ಮಾನವಕುಲ ಹೊಗೆಸೊಪ್ಪಿನ ಸೇವನೆಯಿಂದ ಪೂರ್ಣವಾಗಿ ಮುಕ್ತಗೊಂಡಿದ್ದಾಗಿರಬೇಕೆಂಬ ಆಶಯವನ್ನು ಹೊಂದಿರುವ ಹಿನ್ನೆಲೆಯಲ್ಲಿ ಧೂಮಪಾನದಿಂದ ಸಮಾನತೆಯನ್ನು ಸಾಧಿಸಬೇಕೆಂಬ ಲಾಲಸೆಯು ಬಾಲಿಶ ಮಾತ್ರವಲ್ಲ; ಅದು ವಿಕೃತ ಮನಸ್ಸಿನ ಸೂಚಕವೂ ಆಗಿದೆ.

ತಂಬಾಕು ಸೇವನೆಯು ಬೀಡಿ–ಸಿಗರೇಟು ತಯಾರಿಸುವವರಿಗೆ ಮತ್ತು ಮಾರಾಟ ಮಾಡುವವರಿಗೆ ಜೀವನಾಧಾರ ಮತ್ತು ಲಾಭದಾಯಕ. ಹೀಗಿರುವುದರಿಂದಲೇ ಹೊಗೆಸೊಪ್ಪನ್ನು ಬೆಳೆಯುವವರು ಬೇರೆ ಬೆಳೆಗಳನ್ನಿಡಲು ಸಿದ್ಧರಾಗುವುದಿಲ್ಲ. ಬೇರೆಷ್ಟೋ ಉದ್ಯಮಗಳಂತೆ ಇದೂ ಸಹ ಹಾನಿಯನ್ನು ಬಂಡವಾಳವನ್ನಾಗಿಸಿಕೊಂಡಿದೆ.

ಇದಕ್ಕೂ ಮಹಿಳಾ ಸ್ವಾತಂತ್ರ್ಯಕ್ಕೂ ಯಾವ ಸಂಬಂಧವೂ ಇರಲಾರದಾದರೂ ಈಚಿನ ಒಂದು ಸಿಗರೇಟಿನ ತಯಾರಕರು ತಮ್ಮ ಜಾಹಿರಾತುಗಳಲ್ಲಿ ಅದನ್ನು ಮಹಿಳೆಯ ಹಕ್ಕು ಮತ್ತು ಸವಲತ್ತಿಗೆ ದಾರಿದೀಪವೆಂಬಂತೆ ಸಾರುತ್ತಿದ್ದಾರೆ. ಉದ್ಯಮದವರು ಮಾರಾಟಕ್ಕಾಗಿ ಯಾವ ಘೋಷಣೆಯನ್ನೇ ನೀಡಿದರೂ ಅದನ್ನು ಸ್ವಲ್ಪ ಅಂಜಿಕೆಯಿಂದ ಸ್ವೀಕರಿಸುವುದು ವಾಡಿಕೆ. ಆದರೆ ಈ ಸಂದರ್ಭದಲ್ಲಿ ಮಾತ್ರ ಅದು ಯಥಾವತ್ತಾದ ಮಾತು ಎಂಬಂತೆ ಪಾಂಡಿತ್ಯಪೂರ್ಣ ಚರ್ಚೆ ನಡೆಯುತ್ತಿರುವುದು ನಮ್ಮ ಮೂರ್ಖತನದ ಕುರುಹಾಗಿದೆ. ಆ ಸಿಗರೇಟನ್ನು ಮಹಿಳಾ ವಿಮೋಚನೆಯ ಮಾಧ್ಯಮವೆಂದು ಡಂಗುರ ಹೊಡೆಯುತ್ತಿರುವ ಸ್ತ್ರೀತ್ವವಾದಿಗಳಿಗೂ ಉದ್ಯಮದಿಂದ 'ಕಮಿಶನ್ ಏನಾದರೂ ಲಭಿಸಿದೆಯೋ' ಎಂಬ ಗುಮಾನಿ ಹುಟ್ಟಿದರೆ ಆಶ್ಚರ್ಯವಿಲ್ಲ. 3000 ಕೋಟಿ ರೂಪಾಯಿಗಳ ಬಂಡವಾಳದ ವಹಿವಾಟನ್ನು ನಡೆಸುವ ತಂಬಾಕು ಉದ್ಯಮ ಹಾಗೆ ಕಮಿಶನ್ ನೀಡಿ ಕ್ರಮೇಣ ಕುಸಿಯಬೇಕಾದ ಮಾರುಕಟ್ಟೆಯಲ್ಲಿ ಊರ್ಜಿತಗೊಳ್ಳಲು ಯತ್ನಿಸುವುದು ಸಹಜವೆನಿಸುತ್ತದೆ. ಆದ್ದರಿಂದಲೇ ಹೊಸಹೊಸ ತಂತ್ರಗಳಿಂದ ತಂಬಾಕು ಸೇವನೆಯನ್ನು ವೃದ್ಧಿಗೊಳಿಸುವುದು ಅದರ ನೈತಿಕಧರ್ಮ!

ಗೋಲ್ಡನ್ ಟೊಬ್ಯಾಕೊ ಕಂಪನಿಯು "ಎಂಎಸ್." ಎಂಬ ತನ್ನ ನೂತನ ಸಿಗರೇಟನ್ನು ನವಿರಾದ ಲಲನೆಯರಿಗಾಗಿಯೇ ಸಿದ್ಧಗೊಳಿಸಿರುವುದಾಗಿ ಜಾಹಿರಾತು ನೀಡುತ್ತಿದೆ. ಅದು ಮುಕ್ತ ಮಹಿಳೆಯರ ಸ್ತ್ರೀತ್ವದ ಸಂಕೇತವಂತೆ; ಸ್ತ್ರೀ ದೇಹಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳುತ್ತದಂತೆ; ಪೈಪೋಟಿಯಿಂದ ಕೂಡಿದ ಪುರುಷ ಪ್ರಧಾನ ಪ್ರಪಂಚದಲ್ಲಿ ಮಹಿಳೆಯ ಸಾಧನೆಗೆ ಸೂತ್ರವಂತೆ; ಮಹಿಳೆಯ ತಾಕತ್ತಿನ ದ್ಯೋತಕವಂತೆ ಮತ್ತು ವಿಮೋಚನೆಗೊಂಡ ಜೀವನ ಶೈಲಿಗೆ ಮಾರ್ಗವಂತೆ !!

ಹೊಗೆಸೊಪ್ಪಿನಿಂದ ಉಂಟಾಗುವ ರೋಗವನ್ನು ಇಷ್ಟು ಸುಂದರವಾಗಿ ಚಿತ್ರಿಸಿರುವ ಜಾಹಿರಾತುದಾರರಿಗೆ ಒಂದು ವಿಕ್ರಮ ದಾಖಲೆಗಾಗಿ ಪುರಸ್ಕಾರ ನೀಡಬೇಕು. ಕ್ಯಾನ್ಸರ್‌ನಿಂದ ಬಾಧೆಯನ್ನು ಆಹ್ವಾನಿಸಿಕೊಳ್ಳಲು, ಲಿಂಗ ಭೇದವನ್ನು ಮೀರಿ ಸಮಾನತೆಯತ್ತ ಹೆಜ್ಜೆಹಾಕಲು; ಇಂತಹ ಉತ್ತಮ ಸಾಧನೆಯನ್ನು ಮಹಿಳೆಯರಿಗೆ ಕಲ್ಪಿಸಿಕೊಟ್ಟಿರುವ ಈ ಕಂಪನಿಗೆ ಯಾವ ವಿಶೇಷ ಶ್ಲಾಘನೆ ಸಲ್ಲಬೇಕೋ ಊಹಿಸಲಾಗುವುದಿಲ್ಲ. ನಾವು ಬೇಡವೆಂದರೂ

ನಮ್ಮನ್ನು ಆಕ್ರಮಿಸುವ ಕ್ಯಾನ್ಸರ್ ಈಗಾಗಲೇ ಮನೆ ಮಾಡಿಕೊಂಡಿದೆ. ಆಕಸ್ಮಾತ್ತಾಗಿ ಆ ಬಾಧೆ ತಟ್ಟದಿದ್ದರೆ ಮಹಿಳೆಯರ ಸಮಾನತೆಗೆ ಧಕ್ಕೆ ಬಂದೀತೆಂದು ಸೃಷ್ಟಿಯಾಗಿದೆ ಈ ಸಿಗರೇಟು!

"ನೀವು ಸಿಗರೇಟು ಸೇದಿದರೆ ಮಾತ್ರ ನಮಗೆ ಲಾಭ; ಆದ್ದರಿಂದ ನಿಮಗೆ ರೋಗ ತಗಲಿದರೂ ಸರಿಯೆ, ದಯಮಾಡಿ ನಮ್ಮ ಸಿಗರೇಟು ಕೊಳ್ಳಿರಿ", ಎಂದು ಕಂಪನಿ ತನ್ನ ಜಾಹಿರಾತುಗಳಲ್ಲಿ ಮಹಿಳೆಯರನ್ನು ಬೇಡಿಕೊಂಡಿದ್ದರೆ ಅದು ಹೆಚ್ಚು ಯಥಾರ್ಥವಾಗಿರುತ್ತಿತ್ತು. ಅಥವಾ, "ಸಯನೇಡ್‌ನಿಂದ ಸಮಾನತೆಯತ್ತ" ಎಂದು ಕೆಲವು ವಿಕೃತ ಮನಸ್ಸಿನವರು ಮಹಿಳೆಯರಿಗೆ ಕರೆ ಕೊಟ್ಟಿದ್ದರೂ ಆಗುತ್ತಿತ್ತು. ಅಶ್ಲೀಲ ಭಿತ್ತಿ ಪತ್ರಗಳಷ್ಟೇ ಕ್ಷುದ್ರವಾದ ಜಾಹಿರಾತು ಈ "ಎಂ. ಎಸ್" ಸಿಗರೇಟಿನ ಜಾಹಿರಾತು ಎಂಬುದನ್ನಿಲ್ಲಿ ಗಮನಿಸಬೇಕು. 'ರೋಗಕ್ಕೆ ಲಿಂಗಭೇದವಿಲ್ಲವೆಂಬುದು ಸಿಗರೇಟಿನ ಸಂದರ್ಭದಲ್ಲಂತೂ ನಿಜ. ಈ ಕಂಪನಿಯವರಿಗೆ ಹೇಳಬೇಕಾದ್ದಿಷ್ಟೆ: "ರೋಗ ತರಿಸಿಕೊಂಡು ಸಮಾನತೆಯನ್ನು ಅನುಭವಿಸಬೇಕಾದರೆ ಗಂಡಸು ಸೇದುವ ಸಿಗರೇಟನ್ನೇ ಸೇದಿ ತರಿಸಿಕೊಳ್ಳುತ್ತೇವೆ. ಅದಕ್ಕೆ ನಿನ್ನ ಸಹಾಯದ ಅಗತ್ಯವಿಲ್ಲ, ತೊಲಗು."

"ಧೂಮಪಾನದಿಂದ ಸಮಾನತೆ" ಎಂಬ ಘೋಷಣೆ ನೀಡಿರುವ ಗೋಲ್ಡನ್ ಟೊಬ್ಯಾಕೊ ಕಂಪನಿಯು ತನ್ನ ಮಹಿಳಾ ನೌಕರರಿಗೆ ಕೂಲಿಯಲ್ಲಿ ಎಂತಹ ಸಮಾನತೆಯನ್ನು ನೀಡಲು ತಯಾರಿದೆ ಎಂಬ ಪ್ರಶ್ನೆ ಅಪ್ರಸ್ತುತವಲ್ಲ. ಆ ನೌಕರರು "ಎಂ ಎಸ್" ಸಿಗರೇಟ್ ಕೊಳ್ಳುವ ಗೋಜಿಗಂತೂ ಹೋಗುವಂತಿಲ್ಲ, ಏಕೆಂದರೆ ಆ ಸಿಗರೇಟಿನ ಒಂದು ಪ್ಯಾಕೆಟ್ಟಿನ ಬೆಲೆ ಕೇವಲ 20 ರೂಪಾಯಿಗಳು!

ತನ್ನ ಮಾರುಕಟ್ಟೆಯನ್ನು ಸೃಷ್ಟಿಸಿಕೊಳ್ಳಲು ಇಂತಹ ನಿಕೃಷ್ಟ ಜಾಹಿರಾತು ನೀಡುವ ಕಂಪನಿಯನ್ನು ಧಿಕ್ಕರಿಸಬೇಕು. ಸಿಗರೇಟು ಸೇದುವ ಹವ್ಯಾಸ ಬೆಳೆಸಿಕೊಂಡಿರುವ ಮಹಿಳೆಯರು ಬೇರಾವ ಸಿಗರೇಟನ್ನಾದರೂ ಸೇದಲಿ, ಇದನ್ನಂತೂ ಸೇದುವುದು ಬೇಡ:–ಇದು ಮೊದಲ ಹೆಜ್ಜೆ. ಆಮೇಲೆ ಯಾವ ಸಿಗರೇಟು ಕಂಪನಿಗೂ ನಮ್ಮಿಂದ ಲಾಭ ಬೇಡ ಎಂಬುದು ಮಹಿಳೆಯರ ಮತ್ತು ಪುರುಷರ ಸಂಯೋಜಿತ ತೀರ್ಮಾನವಾಗಬೇಕು. ಸಿಗರೇಟು ಸೇದುವುದರಿಂದ ಸಮಾನತೆ ದೊರಕಿಸಿಕೊಳ್ಳುವ ಬದಲು ಅದನ್ನು ಸೇದದಿರುವುದರಿಂದಲೂ ಸಮಾನತೆ ಪಡೆಯಬಹುದಲ್ಲವೆ? ಗೋಲ್ಡನ್ ಟೊಬ್ಯಾಕೊ ಕಂಪನಿಯು ಅದರ ಮಾಲೀಕನಿಗೆ "ಗೋಲ್ಡ್" ನೀಡುತ್ತದೆ, ನಿಜ. ಆದರೆ "ಎಂಎಸ್" ಸಿಗರೇಟನ್ನು ಸೇದಿ "ಸಮಾನತೆ" ಪಡೆಯ ಹೊರಡುವ ಮಹಿಳೆಗೆ ಅದು ನೀಡುವುದು ಬೇರಾವ ಸಿಗರೇಟಾದರೂ ನೀಡುವ ಕೋಲ್ ಟಾರನ್ನು ಮಾತ್ರವೇ! ! ಆ ಟಾರನ್ನು ಒಟ್ಟು ಮಾಡಿ ಆ ಕಂಪನಿಯ ಮುಖಕ್ಕೆ ಎರಚುವುದು ಸಹ ಸಮಾನತೆಯ ಹಾದಿಯಾಗಬಹುದು. ○

---

## ಮಹಿಳೆ ಮತ್ತು ಧೂಮಪಾನ

○ ಚಂದ್ರ

ಮೊನ್ನೆ ಮೊನ್ನೆಯವರೆಗೂ ಭಾರತದಲ್ಲಿ ಮಹಿಳೆಯರಿಗಾಗಿಯೇ ಸಿಗರೇಟುಗಳಿರಲಿಲ್ಲ. ವಿದೇಶಗಳಲ್ಲಿ ಯಥೇಚ್ಛವಾಗಿ ಹೆಂಗಸರಿಗೆಂದೇ ದೊರೆವ 'ವರ್ಜೀನಿಯಾ ಸ್ಲಿಮ್ಸ್' 'ಕಾರ್ಲ್‌ಟನ್' 'ಶೆಲ್ಸಿಯಾ' ಮುಂತಾದ ಮಾದರಿಯ ಸಿಗರೇಟುಗಳ ಅಪರವತಾರ ಇದೀಗ 'ಎಂ ಎಸ್' ರೂಪದಲ್ಲಿ ಉದ್ಭವಿಸಿದೆ. ವಿದೇಶಗಳಲ್ಲಿ ಸ್ವಾಸ್ಥ್ಯದ ಬಗ್ಗೆ ಹೆಚ್ಚು ಹೆಚ್ಚಿನ ಜಾಗರೂಕತೆ ಮೂಡುತ್ತಿರುವಂತೆ ಅಲ್ಲಿಯ ಸಿಗರೇಟು ವ್ಯಾಪಾರವೂ ಇಳಿಯುತ್ತಿದ್ದು, ಈ ಸಮಯದಲ್ಲಿ ತೃತೀಯ ಜಗತ್ತಿನ ರಾಷ್ಟ್ರಗಳ ಮಹಿಳೆಯರು ಸಿಗರೇಟುಗಳಿಗೆ ಹೊಚ್ಚ ಹೊಸ ಗಿರಾಕಿಗಳಾಗಿ ಕಂಡರೆ ಆಶ್ಚರ್ಯವೇನು? ಬಹು ಮುಖ್ಯ ಅಂಶವೆಂದರೆ 'ಹೆಂಗಸರಿಗೆಂದೇ ತಯಾರಾಗುವ' ಈ ಸಿಗರೇಟುಗಳು ನೋಡಲು ತೆಳ್ಳಗೆ ಸುಂದರವಾಗಿರುವುದು ಬಿಟ್ಟರೆ ಉಳಿದೆಲ್ಲ ಸಿಗರೇಟುಗಳಷ್ಟೇ ಅಪಾಯಕಾರಿ.

'ವೋಗ್' 'ಕಾಸ್ಮೊಪಾಲಿಟನ್' 'ವಿಮೆನ್ಸ್ ಜರ್ನಲ್' 'ಬಾಜಾರ್'... ಇಂಥಾ ಯಾವುದೇ ವಿದೇಶಿ ಪತ್ರಿಕೆಯ ತೆರೆದು ನೋಡಿದರೆ, ಅಲ್ಲಿಯ ಪ್ರತಿ ಸಿಗರೇಟಿನ ಜಾಹಿರಾತಿನಲ್ಲಿ, ಆ ಸಿಗರೇಟಿನಲ್ಲಿರುವ 'ಟಾರ್' ಅಂಶ, 'ನಿಕೋ

ಟಿನ್' ಅಂಶವನ್ನು ಅತಿ ಮಾಡಿ ನಮೂದಿಸಿರುತ್ತಾರೆ. ಧೂಮಪಾನದಿಂದ ಶ್ವಾಸಕೋಶದ ಕ್ಯಾನ್ಸರ್, ಹೃದಯದ ರೋಗಗಳು, ಎಂಫಿಸೀಮಾ ಮುಂತಾದ ರೋಗಗಳು ಬರಬಹುದೆಂದು ಎಚ್ಚರಿಸುವುದಲ್ಲದೆ, ಹೆಂಗಸರಿಗೆಂದೇ ಹೆಚ್ಚಿನ ಎಚ್ಚರಿಕೆಯೂ ಇರುವುದುಂಟು. 'ಧೂಮಪಾನದಿಂದ ಭ್ರೂಣಕ್ಕೆ ಅಪಾಯ ಉಂಟಾಗಬಹುದು, ದಿನ ತುಂಬುವ ಮೊದಲೇ ಹೆರಿಗೆಯಾಗಬಹುದು, ಹುಟ್ಟುವ ಮಗುವಿನ ತೂಕ ಕಡಮೆಯಾಗಬಹುದು' ಎಂದೂ ಎಚ್ಚರಿಸುತ್ತದೆ. ಇಂಥಾ ಯಾವುದೇ ವಿವರಗಳಿಗೆ ಒಗ್ಗದ ಭಾರತೀಯ ಸಿಗರೇಟಿನ ಜಾಹಿರಾತುಗಳಿಗೆ, ಕಾಯಿದೆಯ ಪ್ರಕಾರ ಎಚ್ಚರಿಕೆ ನೀಡುವುದು ಕಾಟಾಚಾರದ ವಿಧಿಯಷ್ಟೆ. ಅದರಲ್ಲೂ 'ಎಂ ಎಸ್' ಸಿಗರೇಟಂತೂ ಎಡಬದಿಯ ಮೂಲೆಗೆ ಅಸ್ಪಷ್ಟ ಅಕ್ಷರ ಶೈಲಿಯಲ್ಲಿ 'ಎಚ್ಚರಿಕೆ'ಯ ನೀಡುತ್ತದೆ!

ಮಹಿಳೆ ಮತ್ತು ಸಿಗರೇಟು ಈಗ ಅತ್ಯಂತ ಆಧುನಿಕ ರೀತಿಯಲ್ಲಿ ಪ್ರತಿಪಾದಿಸಲಾಗಿದೆ. ಹೆಣ್ಣಾಗಲು ಹೆಮ್ಮೆ ಪಡುವ ಹೆಂಗಸು...ಮನೆಯಲ್ಲಿ ಮುದುಡಿ ಕುಳಿತವಳಲ್ಲ, ತಾನು ಹೆಣ್ಣಾದುದಕ್ಕೆ ಅತ್ತವಳಲ್ಲ, ಗಂಡಾಗಬಯಸಿದವಳಲ್ಲ...ಅಂದರೆ ಹೆಚ್ಚು ಕಮ್ಮಿ ಇಂದಿನ ಸ್ತ್ರೀವಾದಿ ಆಧುನಿಕ ಹೆಣ್ಣಿನತ್ತ ಜಾಹಿರಾತು ಸೆಳೆಯುತ್ತದೆ. ಜೊತೆಗೆ ಕೆಲಸದಲ್ಲಿರುವವಳ (ಗಂಡನ ಹಣದಿಂದ ಸಿಗರೇಟು ಸೇದುವುದು ಸುಲಭವಲ್ಲವಲ್ಲ), ಸ್ವಂತ ಬುದ್ಧಿಯುಳ್ಳವಳ, ಸ್ವತಂತ್ರ ಮನೋಭಾವದವಳ ಆಯ್ಕೆ 'ಸಿಗರೇಟ್' ಎಂದು ಜಾಹಿರಾತು ಕೂಗಿದೆ. ಅಂದರೆ ಒಂದು ಬಗೆಯಲ್ಲಿ ಸ್ವತಂತ್ರ ಮನೋಭಾವವನ್ನು, ಸ್ತ್ರೀವಾದವನ್ನು, ಸಿಗರೇಟು ಸೇದುವುದರಲ್ಲಿ ಅಭಿವ್ಯಕ್ತಿಸಹೊರಟಂತಿದೆ. ಇದು ಅಪಾಯಕಾರಿ ಪ್ರತಿಮೆಯೇನೋ ನಿಜ, ಆದರೆ ಇಂಥಾ ಪ್ರತಿಮೆಗಳ ಪ್ರಸಾರಿಸುವ ಬಗ್ಗೆ ರೇಗುವುದು ತಪ್ಪಾಪೆ ಆದೀತು. ಕಾರಣ ಎಲ್ಲಾ ಜಾಹಿರಾತುಗಳೂ ಸುಳ್ಳುಗಳನ್ನೇ ಹೇಳುವುದು. ಗಂಡಸರ ಸಿಗರೇಟುಗಳಲ್ಲಿ ಗಂಡಸುತನವನ್ನು, ಕ್ರಿಯಾಶೀಲತೆಯನ್ನು, ವ್ಯಕ್ತಿಯ ತೃಪ್ತಿಯ ಆಯ್ಕೆಯಾಗಿ, ಸ್ತ್ರೀಯರು ತಬ್ಬಿನಿಂತ ಆಕರ್ಷಕ ಯುವಕನ ಪ್ರತಿಮೆಯೊಡನೆ ಬಿತ್ತರಿಸುವಂತೆಯೇ, ಈ ಹೆಂಗಸರ ಸಿಗರೇಟು ಕೂಡ, ತನ್ನ ಗ್ರಾಹಕರಾಗಬಲ್ಲ ಆಧುನಿಕ ಹೆಣ್ಣನ್ನು ಸೆಳೆಯಲು ಹೊರಟಿದೆ. ಸಿಗರೇಟು ಸೇದುವಾತ ದುಶ್ಚಟಕ್ಕೆ ಈಡಾದ ವ್ಯಕ್ತಿ. ಅದರಾಚೆ ಮತ್ತೇನೂ ಅಲ್ಲ. ತನ್ನ ಆರೋಗ್ಯದ ಹಾನಿ ಉಂಟು ಎಂದು ತಿಳಿದು ಸೇದುವಾತ ಒಂದಿಷ್ಟು ಮೂರ್ಖನೂ ಹೌದು. ಸಿಗರೇಟಿನ ಅಪಾಯಗಳ ಬಗ್ಗೆ ಹಲವಾರು ಜನಹಿತ ಜಾಹಿರಾತುಗಳು ದೂರದರ್ಶನದಲ್ಲಿ, ಪತ್ರಿಕೆಗಳಲ್ಲಿ ಆಗಾಗ ಮೂಡಿಬರುತ್ತವೆ. ಆದರೆ ಇದೀಗ ಈ ಜಾಡ್ಯ ಸ್ತ್ರೀಯರತ್ತ ವ್ಯಾಪಿಸುವ ಸಾಧ್ಯತೆ ಹೆಚ್ಚಿರುವುದರಿಂದ, ಸ್ತ್ರೀಯರ ಸ್ವಾಸ್ಥ್ಯದ ಮೇಲೆ ಬೀರುವ ಪರಿಣಾಮಗಳತ್ತ ಕೇಂದ್ರೀಕರಿಸಿ ಒಂದಿಷ್ಟು ಪ್ರಚಾರವಾಗಬೇಕು. ಈ ಸಿಗರೇಟು ಎಳೆಯುವುದರಲ್ಲಿ ವಿಶೇಷವಾದ ಸ್ತ್ರೀತನವಾಗಲೀ, ಸ್ತ್ರೀವಾದವಾಗಲಿ ಅಡಗಿಲ್ಲ ಎನ್ನುವುದು ಸಾಮಾನ್ಯರಿಗೆ ತಲುಪುವಂತೆ ಮನವರಿಕೆಯಾಗಬೇಕು.

ಮಹಿಳಾ ಚಳುವಳಿಯ ಆದಿಯಲ್ಲಿ ಒಂದಿಷ್ಟು ಪಥಭ್ರಷ್ಟ ಮಹಿಳೆಯರು ಸಿಗರೇಟು ಹಿಡಿದು, ಗಂಡಸರ ಅನುಕರಣೆಯಲ್ಲೇ ಸ್ತ್ರೀವಾದವ ಹುಡುಕಲು ಹೊರಟದ್ದು ಉಂಟು. ಸಿಗರೇಟು ಹಿಡಿದು ಸಮಾನತೆ ಸಾಧಿಸುವುದಕ್ಕಿಂತಾ ಹಾಸ್ಯಾಸ್ಪದವಾದದ್ದು ಮತ್ತೊಂದಿಲ್ಲ. ಸಮಾನತೆ ಅನುಕರಣೆಯಲ್ಲಾಗಲೀ, ಸ್ಥಾನಪಲ್ಲಟದಲ್ಲಾಗಲೀ ಖಂಡಿತಾ ಇಲ್ಲ. ಗಂಡು–ಹೆಣ್ಣುಗಳ ಸಂಬಂಧದ ಸಮತೋಲನ ಅದರ ಗುರಿ.

ಒಂದು ಜಾಹಿರಾತಿನ ಬಗ್ಗೆ ಇಷ್ಟೆಲ್ಲ ಕಳಕಳಿ ವಹಿಸಲು ಕಾರಣ ಇದು ಆರೋಗ್ಯವಂತ, ಮಧ್ಯಮ ವರ್ಗದ, ಕಾಲೇಜು - ಹಾಗೂ - ಉದ್ಯೋಗಸ್ಥ ಯುವತಿಯರತ್ತ ತಿರುಗಿ ತಟ್ಟನೆ, ಸಿಗರೇಟನ್ನು 'ಗ್ಲಾಮರೈಸ್' ಮಾಡುತ್ತಿದೆ, ಎಂಬುದೇ. ಹಾಗಾಗಿ ಈ 'ಫ್ಯಾಡ್'ಗೆ ಆಕರ್ಷಿತವಾಗುವರ ಸಂಖ್ಯೆ ಬಹಳಷ್ಟಿದೆ ಎಂಬ ಆತಂಕ ಈ ಒಂದು ಜಾಹಿರಾತಿನ ಬಗ್ಗೆ ಇಷ್ಟು ದೀರ್ಘವಾಗಿ ಬರೆಯಿಸುತ್ತಿದೆ. ಅತ್ಯಂತ ವಿಷಾದದ ವಿಷಯವೆಂದರೆ ಮಹಿಳಾ ಪತ್ರಿಕೆಗಳೇ ಧಾರಾಳವಾಗಿ ಈ ಜಾಹಿರಾತನ್ನು ಬಿತ್ತರಿಸುತ್ತಿವೆ. ಲಾಭ – ನಷ್ಟಗಳಲ್ಲಿ ತೂಗಲ್ಪಡುವ ವಾಣಿಜ್ಯ ಪತ್ರಿಕೆಗಳಲ್ಲಿ ಮಹಿಳಾ ವಿಷಯಗಳ ಬಗ್ಗೆ ನಿಜವಾದ ಕಳಕಳಿ ನಿರೀಕ್ಷಿಸುವುದು ಹೆಚ್ಚಾಗುವುದೇನೋ. ಆದರೂ ಸ್ತ್ರೀವಾದ–ಸಮಾನತೆಯ ನಿಜವಾದ ಅರ್ಥ ತಿಳಿದ ಪತ್ರಿಕೆಗಳು, ಸ್ತ್ರೀ ಸ್ವಾಸ್ಥ್ಯದ ಬಗ್ಗೆ ಕಳಕಳಿ ಇದ್ದಲ್ಲಿ ಇಂತಹ ಜಾಹಿರಾತುಗಳ ಪ್ರಕಟಣೆ ನಿಲ್ಲಿಸಲಿ. ○



# ಮಹಿಳಾ ಕಾವ್ಯ ವಿಶ್ಲೇಷಣೆ : ಒಂದು ಸಂವಾದ

○ ಡಾ|| ಕೆ. ವಿ. ನಾರಾಯಣ

ಡಾ. ಬಿ.ಎನ್. ಸುಮಿತ್ರಾಬಾಯಿಯವರ 'ಸಾರ್ವತ್ರಿಕದೆಡೆಗೆ' ಪ್ರಕಟವಾಗಿ ಮೂರು ವರ್ಷ ಕಳೆದಿವೆ. ಈ ಪುಸ್ತಕ ಕುರಿತು 'ಪರಿಚಯ-ವಿಮರ್ಶೆ'ಯನ್ನು ಬರೆಯಲು ಇಷ್ಟು ತಡವಾಗಬೇಕಿರಲಿಲ್ಲ. ಈಗ, ತಡವಾಗಿಯಾದರೂ, ಈ ಪುಸ್ತಕದೊಡನೆ ಒಂದು ಸಂವಾದವನ್ನು ಆರಂಭಿಸುವುದು ಹೆಚ್ಚು ಉಚಿತವೆನಿಸಿ, 'ಪರಿಚಯ-ವಿಮರ್ಶೆ'ಯ ಅಂಶವನ್ನು ಹಿನ್ನೆಲೆಗೆ ಸರಿಸಿದ್ದೇನೆ.

ಸುಮಿತ್ರಾಬಾಯಿಯವರ ಒಂದು ನಿಲುವು ಹೀಗಿದೆ : 'ಮಹಿಳಾ ಕಾವ್ಯ-ಮಹಿಳಾ ಸಾಹಿತ್ಯ ಎಂಬ ಪ್ರತ್ಯೇಕ ಪರಿಗಣನೆ ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಅಪ್ರಸ್ತುತವಾದದ್ದು ನಿಜ' (ಪು 1-2) ನನಗೆ ಈ ನಿಲುವು ಒಪ್ಪಿತವಲ್ಲ. ಇಡಿಯಾಗಿ ಸಾಹಿತ್ಯದೃಷ್ಟಿಯನ್ನು ನೋಡಬೇಕೆಂಬ ಸಮಶ್ರದ್ಧೆಯ ಹಿಂದೆ ಏಕಪಕ್ಷೀಯ ನಿಲುವುಗಳಿದ್ದು ಬಹುತ್ವವನ್ನು ಸೂಕ್ಷ್ಮವಾಗಿ ನಿರಾಕರಿಸುವ ಪ್ರವೃತ್ತಿ ಇರುತ್ತದೆ. ಹಾಗಾಗಿ ಮಹಿಳೆಯರ ಬರೆಹಗಳನ್ನು ಪ್ರತ್ಯೇಕಗೊಳಿಸಿ ನೋಡಬೇಕು. ಜತೆಗೆ ಪ್ರತ್ಯೇಕವಾದ ತಾತ್ತ್ವಿಕ ನೆಲೆಗಳನ್ನು ರೂಪಿಸಬೇಕು ಎಂಬ ಚಿಂತನೆಯ ಪರವಾದವನು ನಾನು. ಹೀಗಾಗಿ ಸುಮಿತ್ರಾಬಾಯಿಯವರ ಮೊದಲ ಗ್ರಹಿಕೆಯೊಡನೆ ತಗಾದೆ ಆರಂಭವಾಗುತ್ತದೆ.

ಯಿಂದ ಒಂದು ಶ್ರೇಣಿಯಲ್ಲಿ ಇರಿಸಲಾಗಿದೆ. ಈ ಶ್ರೇಣೀಕರಣಕ್ಕೆ ತಕ್ಕ ಸಬಲ ಸಮರ್ಥನೆಯನ್ನು ಪುಸ್ತಕ ಒದಗಿಸುವುದಿಲ್ಲ. ಹಾಗೆಂದರೆ ಈ ಸಂಕಲನಗಳನ್ನು ಇನ್ನೂ ಒಂದು ಸರಿಯಾದ ಶ್ರೇಣಿಗೆ ಅಳವಡಿಸುವುದು ಸಾಧ್ಯವೆಂದು ನನ್ನ ಅಭಿಪ್ರಾಯವಲ್ಲ; ಒಟ್ಟಾರೆ ಇಂಥ ಶ್ರೇಣೀಕರಣವೇ ಅಷ್ಟು ಅಪೇಕ್ಷಣೀಯವಲ್ಲವೆಂದು ನಾನು ತಿಳಿಯುತ್ತೇನೆ. ಏಕೆಂದರೆ ಸಾಹಿತ್ಯಕವಾದ ಯಾವುದೇ ಮಾನದಂಡ ಕೂಡ ಇಂಥ ಶ್ರೇಣೀಕರಣವನ್ನು ಒಳಗಿನಿಂದಲೇ ವಿರೋಧಿಸುತ್ತಿರುವುದು ಸಾಧ್ಯ.

ಸಂಕಲನಗಳನ್ನು ಮೂರು ಗುಂಪುಗಳಾಗಿಸಿಕೊಂಡು ನಡೆಸಿರುವ ಚರ್ಚೆ ಗ್ರಂಥದ ಚೌಕಟ್ಟಿಗೆ ಸಾಧುವಾಗಿದ್ದರೂ ನನಗೆ ಈ ಭಾಗದ ಅನಂತರ ಬಂದಿರುವ 2ನೇ ಭಾಗದ ಚರ್ಚೆಯಲ್ಲಿ ಮಾತ್ರ ಕುತೂಹಲವಿದೆ (ಪು 48-70) ಇಲ್ಲಿ ಮಹಿಳೆಯರ ಕಾವ್ಯದ ಕೆಲವು ಸಾಮಾನ್ಯ ಲಕ್ಷಣಗಳನ್ನು ಗುರುತಿಸಿದ್ದಾರೆ. ಗುರುತಿಸಲಾದ ನಾಲ್ಕು ಲಕ್ಷಣಗಳೂ ಸಂಪೂರ್ಣವಾಗಿ ಬೇರೆ ಬೇರೆಯಲ್ಲ. ಕಾವ್ಯವೆಂಬುದು ಬರೆಯುವ ಹೆಣ್ಣಿನ ಸಾಮಾಜಿಕ ಶೋಧದ ಸೂಚಕವಾಗಿದೆಯೆಂಬ ತಿಳುವಳಿಕೆಯಿಂದ ಈ ಲಕ್ಷಣಗಳನ್ನು ಗುರುತಿಸಲಾಗಿದೆ. ಈ ಮುಖ್ಯ ತಾತ್ತ್ವಿಕ ನೆಲೆಯೇ ಈ ಕಾವ್ಯವನ್ನು ಪ್ರತ್ಯೇಕವಾಗಿ ಚರ್ಚಿಸಲು ತಕ್ಕ ಕಾರಣವಾಗಿದೆ.

---

'ಸಾರ್ವತ್ರಿಕದೆಡೆಗೆ'— ಲೇ. ಡಾ|| ಬಿ, ಎನ್. ಸುಮಿತ್ರಾಬಾಯಿ
ಮಾನವ ಪ್ರಕಾಶನ : ಬೆಲೆ ರೂ. 10/-

---

ಈ ಪುಸ್ತಕದಲ್ಲಿ ಈಚಿನ ವರ್ಷಗಳಲ್ಲಿ ಬಂದ ಹನ್ನೆರಡು ಜನ ಹೆಂಗಸರ ಕವಿತಾ ಸಂಕಲನಗಳನ್ನು ವಿಮರ್ಶಿಸುತ್ತ, ಮಹಿಳೆಯರ ಕಾವ್ಯದ ಕೆಲವು ಸಾಮಾನ್ಯ ಲಕ್ಷಣಗಳನ್ನು ಗ್ರಹಿಸಿ ಚರ್ಚಿಸಿದ್ದಾರೆ. ಈ ಹನ್ನೆರಡು ಜನರ ಕಾವ್ಯ ಕೃತಿಗಳನ್ನು ಕಾವ್ಯಾತ್ಮಕತೆ ಹಾಗೂ ಸಾಧನೆಗಳ ದೃಷ್ಟಿ

ಕಾವ್ಯವನ್ನು ಬರೆಯುವಾಕೆ ಅದನ್ನು ತನ್ನ ಸಾಮಾಜಿಕ ಚಹರೆಯ ಹುಡುಕಾಟಕ್ಕೆ ಬಳಸುತ್ತಾಳೋ ಅಥವಾ/ಮತ್ತು ತನ್ನ ಸಾಮಾಜಿಕ ವ್ಯಕ್ತಿತ್ವದ ವಿಸ್ತರಣವನ್ನಾಗಿ ಕಂಡುಕೊಳ್ಳುತ್ತಾಳೋ ಎಂಬ ಪ್ರಶ್ನೆಯನ್ನು ಅವಲಂಬಿಸಿ ಕಾವ್ಯದ ಸ್ವರೂಪ, ವ್ಯಾಪ್ತಿಗಳು ಬದಲಾಗುತ್ತವೆಂದು

ತೋರುತ್ತದೆ. ಕವಿತೆ ಬರೆಯುವ ಹೆಚ್ಚು ಹೆಂಗಸರು ಎರಡನೆಯ ನೆಲೆಯವರು ಎಂದು ನನ್ನ ತಿಳುವಳಿಕೆ. ಹಾಗಾಗಿ ಅವರ ಕಾವ್ಯದ ಸಾಮಾನ್ಯ ಲಕ್ಷಣವಾಗಿ ಸಾಮಾಜಿಕ ಚಹರೆಯ ಶೋಧವನ್ನು ಆಲೋಚಿಸಬೇಕೇ ಹೊರತು ಕಾವ್ಯದಲ್ಲೇ ಅಂತರ್ಗತವಾಗಿ ಗುರುತಿಸುವುದು ಕಷ್ಟ. ಹೆಣ್ಣಿನ ಸಾಂಪ್ರದಾಯಿಕ ಬಂಧನ–ಬಿಡುಗಡೆಯ ಮಾದರಿಗಳನ್ನು (ಸೀತೆ, ಶಕುಂತಲೆ, , ಅಕ್ಕಮಹಾದೇವಿ) ಕಾವ್ಯದಲ್ಲಿ ಪರೀಕ್ಷಿಸುವಲ್ಲಿ ಕವಯಿತ್ರಿಯರು ಆ ಮಾದರಿಗಳನ್ನು ಅಭಿವ್ಯಕ್ತಿಯ ಸಾಧ್ಯತೆಗಳನ್ನಾಗಿ ನೋಡುತ್ತಿದ್ದಾರೆ. ಏಕೆಂದರೆ ಆ ಮಾದರಿಗಳ ಸಾಮಾಜಿಕ ವ್ಯಾಖ್ಯಾನ ಅಧಿಕೃತವಾಗಿ ಪುರುಷ ಜಗತ್ತಿನಿಂದ ಬಂದುದಾಗಿರುತ್ತದೆ. ಆದ್ದರಿಂದ ಹೆಂಗಸರು ಕಾವ್ಯವನ್ನು ಏಕಾಂತದ ಸ್ವಗತಗಳನ್ನಾಗಿಸುತ್ತಿರುವ ಕ್ರಮವನ್ನು ವಿವೇಚಿಸುವಲ್ಲಿನ ಯಶಸ್ಸು ಆ ಕಾವ್ಯದ ಸಾಮಾಜಿಕ ಹೊರಚಾಚುಗಳನ್ನು ಚರ್ಚಿಸುವಲ್ಲಿ ದೊರಕಲಾರದು ಎನ್ನಿಸುತ್ತಿದೆ. ಸುಮಿತ್ರಾಬಾಯಿಯವರು ತಮ್ಮ ಬರೆಹದ ಕೊನೆಯ ಭಾಗದಲ್ಲಿ ಈ ನಿಲುವನ್ನು ಪರೋಕ್ಷವಾಗಿ ಒಪ್ಪಿದಂತೆ ತೋರಿದರೂ ಮುಖ್ಯಧಾಟಿ ಮಾತ್ರ ಕಾವ್ಯದ ಸಾಮಾಜಿಕ ಸ್ತರವನ್ನು ವಿಶ್ಲೇಷಿಸುವ ಕಡೆಗಿದೆ.

ಈ ಪುಸ್ತಕವನ್ನು ಕುರಿತ ಚರ್ಚೆಯಲ್ಲಿ ಇನ್ನೊಂದು ಸಾಧ್ಯತೆಯನ್ನು ಹೇಳಲು ನಾನು ಯತ್ನಿಸಿದ್ದರ ಹಿಂದೆ ಈ ಚರ್ಚೆಯನ್ನು ಅಲ್ಲಗೆಳೆಯುವ ಉದ್ದೇಶವಿಲ್ಲ. ಬದಲಿಗೆ ಇಂಥ ಚರ್ಚೆಯನ್ನು ಆರಂಭಿಸುವ ಸುಮಿತ್ರಾಬಾಯಿಯವರ ಪ್ರಯತ್ನವನ್ನು ಗೌರವಿಸುತ್ತಲೇ ಚರ್ಚೆಯ ವಿಸ್ತರಣೆಯನ್ನು ಸೂಚಿಸಿದ್ದೇನೆ. O

---

## ವಿವಾಹ ಸಮಸ್ಯೆಗಳ ವಿಶ್ಲೇಷಣೆ

O ಕೆ. ವಿಜಯಶ್ರೀ

ವಾನಪ್ರಸ್ಥದಂಥ ವಿಚಾರಪೂರ್ಣ ಕಾದಂಬರಿಯಿಂದ ಸಾಹಿತ್ಯಾಸಕ್ತರ ಗಮನ ಸೆಳೆದ ಸರೋಜ ನಾರಾಯಣ ರಾವ್ ಅವರ 'ವಧು' ವಿವಾಹ ಸಮಸ್ಯೆಗಳನ್ನು ವಿಶ್ಲೇಷಿಸಿದೆ. ಹೇಳುವ ವಿಚಾರಗಳು ಇಲ್ಲಿ ಕೇವಲ ವರದಿಯಾಗದೆ, ಕಥೆಯೊಂದರ ಎಳೆಯಲ್ಲೇ ನೇಯುತ್ತಾ ಸಮಸ್ಯೆಯ ಹಲವು, ಹತ್ತು ಮುಖಗಳನ್ನಿಲ್ಲಿ ಲೇಖಕಿ ತೆರೆದಿಡುತ್ತಾರೆ.

ಸಿರಿವಂತನೊಬ್ಬನ ಮೋಸಕ್ಕೆ ನೊಂದು ಮುಂಬಯಿಯಿಂದ ಬೆಂಗಳೂರಿಗೆ ಬಂದ ಸುಭಾಷಿಣಿ, ಸಮಾನ ಮನೋಧರ್ಮದ ವಿವೇಕನ ಸಂಗಾತಿಯಾಗುವ ತೆಳು ಕಥಾಹಂದರ. ಇದಕ್ಕೆ ಸುಭಾಷಿಣಿಯ ಆಲೋಚನೆಗಳು ಅವಳ ದೊಡ್ಡಪ್ಪನ 'ಭಾರತೀಯ ವಿವಾಹ ಪದ್ಧತಿಗಳು' ಪುಸ್ತಕದ ವಿಚಾರ, ಅದರೊಡನೆ ಸಾಂದರ್ಭಿಕವಾಗಿ ಹೊಂದಿಕೊಳ್ಳುವ ಪೌರಾಣಿಕ ಕಥೆಗಳು, ವರ್ತಮಾನ ಪ್ರಸಂಗಗಳಿಂದ ಹೆಚ್ಚಿನ ಕಸುವು ನೀಡಿದೆ.

ವೇದಕಾಲೀನ, ಮಧ್ಯಕಾಲೀನ ಹೆಣ್ಣಿನ ಸ್ಥಾನಮಾನ ಪ್ರವಾಹದೆದುರು ಈಜಿ ಜಯಿಸಿದ ಅಂದಿನ ದೇವಯಾನಿ, ಶರ್ಮಿಷ್ಠೆ, ಸಾವಿತ್ರಿ, ಅಂಬೆ, ಅಂಥ ಧೈರ್ಯವಿಲ್ಲದೆ ಪ್ರವಾಹದೊಡನೆ ಕೊಚ್ಚಿಹೋಗುವ ಇಂದಿನವರು, ಜಾತಿಭೇದವಿಲ್ಲದೆ ಹಬ್ಬಿರುವ ವರದಕ್ಷಿಣೆಯ ಪಿಡುಗು, ಅದನ್ನು ಸಹಜವೆನ್ನುವಂತೆ ಒಪ್ಪಿ ಸಾಗುವ ಶೀಲ, ಅದರ ಕಪಿಮುಷ್ಟಿಯಲ್ಲಿ ನರಳುವ ನಾಗವೇಣಿ, ಪ್ರೀತಿ, ಗಂಡನ ದುರ್ಗುಣಗಳನ್ನು ಮುಚ್ಚಿಟ್ಟು ನರಳುವ ಶೈಲಜ, ಸಾವಿತ್ರಿಯಂತೆ ಗಂಡನನ್ನರಸಿ ವಿದೇಶಕ್ಕೆ ಹೋಗುವ ವಸುಂಧರ, ಅಂತರ್ಜಾತಿ ವಿವಾಹದ ಅಣ್ಣ–ಅತ್ತಿಗೆಯ ಸುಖ ಸಂಸಾರ. ಅದರ ಜೊತೆ ಜೊತೆಗೇ ತರುವ ಸಾಂಪ್ರದಾಯಿಕ ವಿವಾಹದ ದೊಡ್ಡಪ್ಪನ ಬದುಕಿನ ಸವಿ ಎಲ್ಲವನ್ನು ಲೇಖಕಿ ಓದುಗರೆದುರು ಇಡುತ್ತಾರೆ. ಎಲ್ಲಿಯೂ ಲೇಖಕಿ ಇದೇ ಸರಿ ಎನ್ನುವುದಿಲ್ಲ, ಹೀಗಿರಬೇಕು ಎನ್ನುವುದಿಲ್ಲ. ನೀತಿಪಾಠದ ಧಾಟಿಯೂ ಇಲ್ಲಿಲ್ಲ. ನಿರ್ಧಾರ ಓದುಗರಿಗೆ ಬಿಡುವ ಈ ಮನೋಧರ್ಮ ಅಪರೂಪದ್ದು.

ಆದರೆ ಎಲ್ಲರಿಗೂ ಚಿರಪರಿಚಿತವಿರುವ ಶಕುಂತಲೆ, ದ್ರೌಪದಿ, ದೇವಯಾನಿ, ಅಂಬೆಯ ಕಥೆಯನ್ನು ಲಂಬಿಸದೆ, ಸಾಮ್ಯವಷ್ಟೇ ಸೂಚಿಸಿದ್ದರೆ ಕಾದಂಬರಿ ಹೆಚ್ಚು ಪರಿಣಾಮಕಾರಿಯಾಗಿರುತ್ತಿತ್ತು.

O

# ಮಹಿಳೆ; ಅಭಿವೃದ್ಧಿ, ಸಮೂಹಮಾಧ್ಯಮ

ಸಮಾಜದಲ್ಲಿ ಆಗಬೇಕಾಗಿರುವ ಬದಲಾವಣೆಗಳನ್ನು ತರುವಲ್ಲಿ, ಸರಕಾರವು ಶ್ರಮಿಸುತ್ತದೆ ಹಾಗೂ ಇವು ಸರಕಾರದಿಂದ ಸಾಧ್ಯ ಎಂಬ ಮೂಲಭೂತ ತಿಳುವಳಿಕೆ ಯಿಂದಲೇ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲಾಗುತ್ತದೆ. ಗ್ರಾಮೀಣ ಮತ್ತು ನಗರ ಪ್ರದೇಶಗಳ ಜನ ಜೀವನದಲ್ಲಿನ ಸಮಾನತೆ, ವಿವಿಧ ಬುಡಕಟ್ಟುಗಳ ನಡುವೆ, ವಿವಿಧ ವೇತನದಾರರ ನಡುವೆ ಮತ್ತು ವಿವಿಧ ಲಿಂಗಗಳ ನಡುವೆ ಸಮಾನತೆಯನ್ನು ತರುವುದು ಆರ್ಥಿಕ ಬೆಳವಣಿಗೆಯ ಮೂಲ ಧ್ಯೇಯೋದ್ದೇಶಗಳಲ್ಲಿ ಒಂದು. ಅಭಿವೃದ್ಧಿ ಯೋಜನೆಗಳ ಮೇಲೆ ಪರಿಣಾಮ ಬೀರಬಲ್ಲವರು ಮತ್ತು ಅವುಗಳ ಪರಿಣಾಮಕ್ಕೊಳಗಾಗುವರು ಮಹಿಳೆಯಾದರೂ ಅವರು ಗುರುತಿಸಲ್ಪಡುವ ಒಂದು ಸಮಷ್ಟಿ ಪಂಗಡವಾಗಿ ಇನ್ನು ಪರಿಗಣಿಸಲ್ಪಟ್ಟಿಲ್ಲ.

ಸಮಾಜದ ಹಾಗೂ ಕುಟುಂಬದ ಆರ್ಥಿಕ, ಚಟುವಟಿಕೆಯ ಕೇಂದ್ರ ಬಿಂದು ಹೆಣ್ಣಾದರೂ ಅಭಿವೃದ್ಧಿ ಯೋಜನೆಯ ರೂಪುರೇಷೆಯಲ್ಲಾಗಲೀ ಆರ್ಥಿಕ ಮೂಲಗಳಿಂದಾಗಲೀ ಹೆಣ್ಣಿಗೆ ಅನುಕೂಲಕರವಾದ ಅಂಶಗಳು ಏನೂ ಇಲ್ಲ. ಅವರು ವಿದ್ಯೆ, ತಂತ್ರಜ್ಞಾನ, ತರಬೇತಿ, ಅರ್ಥಪೂರ್ಣ ಉದ್ಯೋಗ, ಮತ್ತು ನಿರ್ಧಾರಗಳನ್ನು ಕೈಗೊಳ್ಳುವ ಅವಕಾಶಗಳಿಂದ ವಂಚಿತರಾಗಿದ್ದಾರೆ. ಅದರ ಪರಿಣಾಮವಾಗಿ ಎಲ್ಲ ವೃತ್ತಿಗಳಲ್ಲಿ ಕೆಳ ಹಂತದಲ್ಲಿ ಮಾತ್ರ ಅವರು ಹೆಚ್ಚಾಗಿ ಕಂಡುಬರುತ್ತಾರೆ.

ಪುರುಷರ ಆದ್ಯತೆಗಳು ಮತ್ತು ವೃತ್ತಿಯಲ್ಲಿನ ಕೆಲಸದ ಪದ್ಧತಿಗಳನ್ನು ದಾಖಲಿಸುವಂತೆಯೇ ಹೆಣ್ಣಿನ ದುಡಿಮೆ ಮತ್ತು ಆದಾಯವನ್ನು ಹೆಚ್ಚು ಮಾನವೀಯವಾಗಿ ಮತ್ತು ವಾಸ್ತವಿಕವಾಗಿ ಕಾಣಬೇಕು. ಗಂಡಸರಿಲ್ಲದ, ವಲಸೆ ಹೋಗಿರುವುದರಿಂದ ಇದ್ದೂ ಇಲ್ಲದಂತಿರುವ ಕುಟುಂಬಗಳು ಉಳಿಯಲು ಮತ್ತು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಹೆಂಗಸರ ಆದಾಯ ಬಹುಮುಖ್ಯ ಪಾತ್ರವಹಿಸುತ್ತವೆ. ಮಹಿಳೆಯರು ಪುರುಷರಿಗೆ ಹೋಲಿಸಿದರೆ ತಮ್ಮ ಆದಾಯದ ಹೆಚ್ಚು ಭಾಗವನ್ನು ತಮ್ಮ ಕುಟುಂಬಗಳಿಗಾಗಿ ಖರ್ಚು ಮಾಡುತ್ತಾರೆ, ಎಂದು ಸಂಶೋಧನೆಗಳು ದೃಢಪಡಿಸಿವೆ. ಅಷ್ಟೇ ಅಲ್ಲ ಕುಟುಂಬದ ಒಳಗಿನ ಹಣಕಾಸಿನ ವ್ಯವಹಾರಗಳನ್ನು ನಿಯಂತ್ರಿಸುವಲ್ಲಿಯೂ ಲಿಂಗಭೇದ ನೀತಿಯು ಕೆಲಸ ಮಾಡುವುದನ್ನು ಕಾಣಬಹುದಾಗಿದೆ.

ಹೆಣ್ಣಿನ ಉತ್ಪಾದನಾಶಕ್ತಿಯ ಬಳಲುವಿಕೆಗೆ ಹಲವಾರು ಕಾರಣಗಳಿವೆ. ಹೆಣ್ಣಿನಲ್ಲಿರುವ ಉದ್ಯಮಶೀಲ ಸಾಮರ್ಥ್ಯವನ್ನು ಸರಿಯಾಗಿ ಬಳಸಿಕೊಳ್ಳಲು ಸರ್ಕಾರ ಸಾಕಷ್ಟು ಅವಕಾಶಗಳನ್ನು ನೀಡಬೇಕು. ಹೆಣ್ಣಿನ ವಿದ್ಯಾಭ್ಯಾಸಕ್ಕೆ ಕೊಡುವಷ್ಟೇ ಪ್ರಾಮುಖ್ಯತೆಯನ್ನು ಅವರ ತಾಂತ್ರಿಕ ತರಬೇತಿ ಕಾರ್ಯಕ್ರಮಗಳಿಗೂ ಕೊಡಬೇಕು. ಆಗ ಭವಿಷ್ಯದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರು ತೊಡಗಲು ಸಾಧ್ಯವಾಗುತ್ತದೆ. ವಿದ್ಯಾಭ್ಯಾಸ ಹಾಗೂ ತರಬೇತಿ ಕಾರ್ಯಕ್ರಮಗಳೆರಡರಲ್ಲೂ ಸಾಂಪ್ರದಾಯಿಕವಾಗಿರುವ ಹೆಣ್ಣಿನ ಪಾತ್ರದ ಮಾದರಿಯ ಪ್ರಭಾವವನ್ನು ಬದಲಾಯಿಸುವತ್ತ ಗಮನ ಕೊಡಬೇಕು. ಔದ್ಯೋಗೀಕರಣವು ಮಹಿಳೆಯರ ಮೇಲೆ ಉತ್ತಮ ಪರಿಣಾಮ ಬೀರುವಂತೆ ಮಾಡಲು ಈ ಅಂಶದತ್ತ ಹೆಚ್ಚು ಗಮನ ಕೊಡಬೇಕು.

ಮಹಿಳೆಯರು ತಾಂತ್ರಿಕ ಮತ್ತು ಆಡಳಿತದ ಕ್ಷೇತ್ರದಲ್ಲಿ ಪಡೆಯುವ ತರಬೇತಿಗೆ ತಕ್ಕಂತೆ ಸೂಕ್ತ ಉದ್ಯೋಗದ ಅವಕಾಶಗಳು ತೆರೆಯಬೇಕು. ಸಾಮಾಜಿಕವಾದ ಮತ್ತು ಆರ್ಥಿಕವಾದ ಕಾರಣಗಳಿಗಾಗಿ ಆರ್ಥಿಕ ಉತ್ಪಾದನಾಶಕ್ತಿಯಾಗಿ ಹೆಣ್ಣನ್ನು ಪರಿಗಣಿಸುವುದು ಕಡಿಮೆ. ಅವರಿಗೆ ತಮ್ಮ ಹಕ್ಕುಗಳ ಬಗ್ಗೆ ಅರಿವಿಲ್ಲ. ಹೆಚ್ಚು ಆದಾಯದ ಇಲ್ಲವೇ ಸಾಂಪ್ರದಾಯಿಕವಲ್ಲದ ವೃತ್ತಿಗಳಲ್ಲಿ ತೊಡಗುವುದಕ್ಕೆ ಬೇಕಾದ ಆತ್ಮವಿಶ್ವಾಸ ಇರುವುದಿಲ್ಲ. ಈ ಕಾರಣಗಳಿಗಾಗಿಯೂ ಅವರು ಸುಲಭವಾಗಿ ಶೋಷಣೆಗೆ ಗುರಿಯಾಗುತ್ತಾರೆ.

ತಮಗೆ ಸಿಕ್ಕುವ ಅಲ್ಪ ವಿದ್ಯಾಭ್ಯಾಸ ಮತ್ತು ತರಬೇತಿಗಳಿಂದಾಗಿ ಮಹಿಳೆಯರಿಗೆ ತಮ್ಮ ಅಂತಶ್ಶಕ್ತಿಯನ್ನು ಬೆಳೆಸಿಕೊಳ್ಳಲು ತುಂಬ ಕಡಿಮೆ ಅವಕಾಶಗಳಿರುತ್ತವೆ. ಬ್ಯಾಂಕುಗಳು ಪುರುಷಪ್ರಧಾನವಾದುದರಿಂದ ಬಹಳಷ್ಟು ಬಾರಿ ಸಾಲ ಪಡೆಯಲು ಕಷ್ಟವೇ ಆಗುತ್ತದೆ. ಸಾಲಕ್ಕೆ ಅಡವಿಡಲು ಯಾವುದೇ ರೀತಿಯ ಆಸ್ತಿಯಾಗಲೀ, ಇರುವುದಿಲ್ಲವಾದ ಕಾರಣ, ಸಾಲ ಪಡೆಯುವುದೂ ಕಷ್ಟವಾಗುತ್ತದೆ. ಈ ಎಲ್ಲ ಹಿನ್ನೆಲೆಯಲ್ಲಿ ಸರ್ಕಾರ ಯೋಜಿಸಿರುವ ಸ್ವಯಂ ಉದ್ಯೋಗದ ಯೋಜನೆಗಳು, ಕುಶಲ ಕೈಗಾರಿಕೆಗಳು, ಹಾಗೂ ಉದ್ಯಮಶೀಲ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಮಹಿಳೆಯರು ಈ ತರಬೇತಿಯ ನಂತರ ನಿರೀಕ್ಷಿಸಿದ ಪ್ರಮಾಣದಲ್ಲಿ ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಲ್ಲ. ಉತ್ಪಾದಕತೆಯನ್ನು ಹೆಚ್ಚಿಸಲು ಸ್ವಯಂ ಉದ್ಯೋಗ ಉತ್ತರವಾಗಬೇಕಾದರೆ, ಆಗ ಉದ್ಯಮಶೀಲತೆಯನ್ನು ಪ್ರೋತ್ಸಾಹಿಸುವುದರೊಂದಿಗೆ ಮಹಿಳೆಯರಿಗೆ ಅನುಕೂಲಕರವಾದಂತಹ ಸಾಮಾಜಿಕ-ಆರ್ಥಿಕ ವ್ಯವಸ್ಥೆಯನ್ನು ಜೊತೆಯಲ್ಲಿ ರೂಪಿಸಬೇಕು. ಉದಾಹರಣೆಗೆ ಈ ಮಹಿಳೆಯರ ಮಕ್ಕಳಿಗೆ ಶಿಶು ಕೇಂದ್ರಗಳನ್ನು ಸ್ಥಾಪಿಸುವುದು, ಇತ್ಯಾದಿ. ಒಟ್ಟಿನಲ್ಲಿ ಮಹಿಳೆಯರ ಶಕ್ತಿ, ಸಾಮರ್ಥ್ಯವು ಉಪಯುಕ್ತವಾಗಿ ಪ್ರಕಟವಾಗಲು ನೆರವಾಗುವಂತಹ ಅವಕಾಶಗಳನ್ನು ಒದಗಿಸಬೇಕು.

ಈ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳ ಪಾತ್ರವೆಲ್ಲಿ? ಸದ್ದಿಲ್ಲದೆ ಇಂದು ಅದು ಸರ್ವವ್ಯಾಪಿಯಾಗಿದೆ. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುತ್ತದೆ; ವೈಯಕ್ತಿಕ ಅಭಿಪ್ರಾಯಗಳನ್ನು ಗಟ್ಟಿಗೊಳಿಸುತ್ತದೆ. ಸಾಮಾಜೀಕರಣದ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರುತ್ತದೆ. ಹಾಗೆಯೇ ಚಿಂತನೆಯನ್ನು, ಸಿದ್ಧಾಂತವನ್ನು ರೂಪಿಸುತ್ತದೆ. ಸಾರ್ವಜನಿಕರು ಸಮೂಹ ಮಾಧ್ಯಮದಲ್ಲಿ ಬಂದದ್ದೆಲ್ಲವನ್ನೂ, ಅಥವಾ ಹೆಚ್ಚು ಭಾಗವನ್ನು ಪರಮ ಸತ್ಯವೆಂದೇ ನಂಬುತ್ತಾರೆ. ಆದ್ದರಿಂದ ಸಮೂಹ ಮಾಧ್ಯಮಗಳು ಜನರ ಆಕಾಂಕ್ಷೆಯ ಪ್ರತಿಬಿಂಬವಾಗುವುದಕ್ಕಿಂತ ಹೆಚ್ಚಾಗಿ, ಜನರ ರೀತಿ ರಿವಾಜುಗಳನ್ನು ರೂಪಿಸುವ ಸಾಧನವಾಗಿದೆ. ಈ ಕಾರಣಗಳಿಂದಲೇ ಸಮೂಹ ಮಾಧ್ಯಮಗಳು ಯಥಾಸ್ಥಿತಿಯನ್ನು ಮುಂದುವರೆಸಿಕೊಂಡು ಹೋಗುವ ಸಾಧನವಾಗಿರುವುದಷ್ಟೇ ಅಲ್ಲದೇ, ಹೊಸ ಮಾದರಿಗಳನ್ನು ಪುನರ್‌ಸೃಷ್ಟಿಸುವ ಸಾಧ್ಯತೆಯನ್ನು ಕಷ್ಟವಾಗಿಸುತ್ತದೆ.

ಸಾಮಾಜಿಕ ವಾಸ್ತವವನ್ನು ಪ್ರತಿಬಿಂಬಿಸುವ ಸಮೂಹ ಮಾಧ್ಯಮಗಳು ಮಹಿಳೆಯರ ಅಗತ್ಯಗಳನ್ನು ಮನುಷ್ಯರ ಅಗತ್ಯಗಳಂತೆ ನೋಡುವುದಿಲ್ಲ. ಶತಮಾನಗಳಿಂದಲೂ ಅಪಮೌಲ್ಯಕ್ಕೀಡಾಗಿರುವ ಸಾಮಾಜಿಕ ಮೌಲ್ಯಗಳ ಬಗೆಗೆ ಮಾತನಾಡುವುದಿಲ್ಲ. ಕುಟುಂಬದ ಪೋಷಕರ ಪಾತ್ರ ವಹಿಸುವ, ಹೊಟ್ಟೆ ತುಂಬಿಸುವ ಹಾಗೂ ಊಟ ಸಂಪಾದಿಸುವ ಮಹಿಳೆಯರ ಪಾತ್ರಗಳನ್ನು ಕುರಿತು ಹೇಳುವುದಿಲ್ಲ. ಸಾಮಾಜಿಕವಾಗಿ ಆರ್ಥಿಕವಾಗಿ ಬೆಂಬಲಿಸುವ ವ್ಯವಸ್ಥೆಯಿಲ್ಲದೆ ಮನೆಯ ಒಳಗಿನ ಮತ್ತು ಹೊರಗಿನ ಜವಾಬ್ದಾರಿಯಿಂದ ತತ್ತರಿಸುವ ಸ್ತ್ರೀ ಪಾತ್ರಗಳನ್ನು ಕುರಿತು ಮಾತನಾಡುವುದಿಲ್ಲ.

ಮುದ್ರಣದ ಹಾಗೂ ಎಲೆಕ್ಟ್ರಾನಿಕ್ ಮಾಧ್ಯಮಗಳೆರಡರಲ್ಲೂ ಈ ವಿಷಯಗಳು ಪ್ರಸ್ತಾಪಗೊಳ್ಳದೆ ಪತ್ರಿಕೋದ್ಯಮದ ಮುಖ್ಯಧಾರೆಯಲ್ಲಿ ಕಾಣಿಸಿಕೊಳ್ಳುವುದೇ ಇಲ್ಲ. ಈ ಅತ್ಯಂತ ಶಕ್ತಿಯುತ ಸಮೂಹ ಮಾಧ್ಯಮಗಳಲ್ಲಿನ ಮಹಿಳಾ ವಿಭಾಗಗಳೂ ಕೂಡ ಪರಿಣಾಮಕಾರಿಯಲ್ಲದ ಸಾಮಾಜಿಕ ಬದ್ಧತೆಯಿಂದ ಕೂಡಿರುತ್ತದೆ. ಒಂದು ವೇಳೆ ಪ್ರಕಟಗೊಂಡರೂ ಅದು ಅತ್ಯಾಚಾರ, ವಧು ದಹನ, ಇಲ್ಲವೆ ಹುಡುಗಿಯರನ್ನು ಕದ್ದೊಯ್ಯುವುದರ ವರದಿಯಾಗಿರುತ್ತದೆ.

ಇವೆಲ್ಲಕ್ಕೂ ಮುಖ್ಯ ಕಾರಣ, ಮಹಿಳಾ ಪ್ರಶ್ನೆಯನ್ನು ನೋಡುವ ಸಂಕುಚಿತ ದೃಷ್ಟಿಕೋನವೇ ಆಗಿದೆ. ಮಹಿಳೆಗೆ ಸಂಬಂಧಪಟ್ಟ ವಿಷಯಗಳು (ವಿದ್ಯಾಭ್ಯಾಸ, ಉದ್ಯೋಗದ ಅವಕಾಶ, ಹೆಣ್ಣಿನ ಮಾನವಶಕ್ತಿಯ ಸಂಪನ್ಮೂಲ, ಹೆಣ್ಣಿನ ವ್ಯಕ್ತಿತ್ವದ ಬೆಳವಣಿಗೆ, ಅವರ ಕುಟುಂಬಗಳು ಮತ್ತು ಮಕ್ಕಳು, ಇವುಗಳನ್ನೊಳಗೊಂಡಂತೆ) ಎಲ್ಲಿಯವರೆಗೆ ಗಂಭೀರ ಬರವಣಿಗೆಯಾಗಿ ಪರಿಗಣಿಸಲ್ಪಡುವುದಿಲ್ಲವೋ, ಮುಖ್ಯ ಕಾಲಂಗಳಲ್ಲಿ ಸಂಪಾದಕೀಯಗಳಲ್ಲಿ ಸ್ಥಳ ಪಡೆಯುವುದಿಲ್ಲವೋ, ಟಿ.ವಿ. ಮತ್ತು ರೇಡಿಯೋಗಳಲ್ಲಿ ಬಹುಮುಖ್ಯವಾದ ಸಮಯಗಳಲ್ಲಿ ಪ್ರದರ್ಶಿತವಾಗುವುದಿಲ್ಲವೋ. ಅಲ್ಲಿಯವರೆಗೆ ಪತ್ರಿಕೆಗಳ ಮೂಲೆಯಲ್ಲಿ ಕಾಣಿಸಿಕೊಳ್ಳುತ್ತಿರುತ್ತವೆ. ಇದೊಂದು ವಿಷವೃತ್ತ, ಇದನ್ನು ಬೇಧಿಸಲು ಸಮೂಹ ಮಾಧ್ಯಮಗಳಿಂದಲೇ ವೇದಿಕೆ ಏರ್ಪಡಬೇಕು ಮತ್ತು ಪೋಷಿಸಲ್ಪಡಬೇಕು.

ಕಮರ್ಷಿಯಲ್ ಸಿನಿಮಾದ ವಿಷಯಕ್ಕೆ ಬಂದರೂ ಈ ಮಾತು ಸತ್ಯ. ಇಲ್ಲಿಯೂ ಹೆಣ್ಣಿನ ಪರಿಕಲ್ಪನೆಯ ಬಗ್ಗೆ ನೇತ್ಯಾತ್ಮಕವಾದ ಹಾಗೂ ನಿಯಂತ್ರಿತ ಅಭಿಪ್ರಾಯಗಳು ಕಂಡುಬರುತ್ತವೆ. ಮಹಿಳೆಯ ಶಕ್ತಿ, ಸಾಮರ್ಥ್ಯದ ಬಗ್ಗೆ ಮತ್ತು ಅದರ ಉಳಿದ ಅನುಕೂಲಗಳ ಬಗ್ಗೆ ಆರೋಗ್ಯಕರವಾದ ದೃಷ್ಟಿಕೋನವನ್ನು ವ್ಯಕ್ತಪಡಿಸುವ ಪ್ರಯತ್ನವೂ ಕೂಡ ಕಂಡು ಬರುವುದಿಲ್ಲ. ಹೆಣ್ಣಿನ ಮಾಮೂಲು ಮಾದರಿಗಳಾದ ಏನನ್ನೂ ಪ್ರಶ್ನಿಸದ, ತ್ಯಾಗಮಯಿಯಾದ ಅಡಿಯಾಳಾಗಬಲ್ಲ, ಯೋಚಿಸುವ ಶಕ್ತಿಯಿಲ್ಲದಂತಹ ಗುಣವಿಶೇಷಗಳೇ ಕಂಡು ಬರುತ್ತವೆ. ಈ ಸಿನಿಮಾಗಳ ಹೆಣ್ಣು ಪಾತ್ರಗಳು ಸತಿ ಸಾಧ್ವಿಯರು, ತಗ್ಗಿ ಬಗ್ಗಿ ನಡೆಯುವ ಸೊಸೆಯರು, ಸರ್ವವನ್ನು ತ್ಯಾಗ ಮಾಡುವ ತಾಯಿಯರು ಮುಂತಾದವರಾಗಿರುತ್ತಾರೆ. ಜಾಹಿರಾತುಗಳ ಮೂಲಕವಾಗಿಯೂ ನಿರಂತರವಾಗಿ ಮಹಿಳೆಯ ಸ್ವಾಭಾವಿಕ ವ್ಯಕ್ತಿತ್ವ, ಅವರ ಶಕ್ತಿ ಸಾಮರ್ಥ್ಯಗಳನ್ನು ಅವರ ವಿದ್ಯಾಭ್ಯಾಸದ ಸಾಧನೆಯನ್ನು ಸಂಪೂರ್ಣ ನಿರಾಕರಿಸುವ, ಅಥವಾ ಅದನ್ನು ಗಣನೆಗೇ ತೆಗೆದುಕೊಳ್ಳದೆ ನಿರ್ಲಕ್ಷಿಸುವ ಕೆಲಸ ನಡೆಯುತ್ತದೆ. ಕನ್ನಡದಲ್ಲಿ ಬಂದ ಕೆಲವು ವಾಸ್ತವ ಅನುಭವವನ್ನು ಚಿತ್ರಗಳಾದ ಘಟಶ್ರಾದ್ಧ, ತಬರನಕಥೆ, ಫಣಿಯಮ್ಮ ಮತ್ತು ಸ್ವಲ್ಪ ಹೇಳಬಹುದಾದರೆ ಮಿಥಿಲೆಯ ಸೀತೆಯರು–ಚಿತ್ರಗಳು ಹೆಣ್ಣಿನ ಸಾಂಪ್ರದಾಯಿಕ ಮಾದರಿಯನ್ನು ಬಿಟ್ಟು ಹೇಳ ಹೊರಟಿವೆ. ವಿಧವೆಯರ ಶೋಷಣೆ ಅಜ್ಞಾನ, ದಾರಿದ್ರ್ಯ, ಮುಂತಾದುವು 'ವಿವಾಹ'ದ ರೀತಿ ರಿವಾಜುಗಳನ್ನು ಹುಡುಗಿಯ ದೃಷ್ಟಿಕೋನದಿಂದ ಪ್ರಶ್ನಿಸಿವೆ. ಆದರೆ ಈ ಚಿಕ್ಕ ಚಿಕ್ಕ ಪ್ರಯತ್ನಗಳಷ್ಟೇ ಸಮಸ್ಯೆಯ ಪರಿಹಾರವನ್ನು ನೀಡಲಾರವು. ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಇಂತಹ ಪ್ರಯತ್ನಗಳು, ನಡೆದಾಗ ಜನರ ನಿಜ ಜೀವನದ ಪ್ರತಿಬಿಂಬವಾದೀತು.

ಒಟ್ಟಿನಲ್ಲಿ ಜೀವನದ ನಿಜ ಸಂದರ್ಭಗಳನ್ನು, ಬದುಕಿಗಾಗಿ ನಡೆಸುವ ಹೋರಾಟವನ್ನು ಸಮೂಹ ಮಾಧ್ಯಮಗಳು ಹೆಣ್ಣಿನ ನಿಜವಾದ ಬದುಕನ್ನು ಚಿತ್ರಿಸುವುದರ ಮೂಲಕ, ಆರೋಗ್ಯ, ವಿದ್ಯಾಭ್ಯಾಸ ಹಾಗೂ ಮಹಿಳೆಯರ ಕೆಲಸದ ಪರಿಕಲ್ಪನೆಯ ಮೂಲಕ ಅರ್ಥಪೂರ್ಣವಾಗಿ ಮಾಡಬೇಕು. ಇಂತಹ ಪ್ರಯತ್ನಗಳು ಹೆಚ್ಚಾಗಿ

○ ಭಾರ್ಗವಿ ನಾಗರಾಜ್

ಕಂಡುಬರುವುದಿಲ್ಲ. ಆದರೆ ಸಮೂಹ ಮಾಧ್ಯಮಗಳ ಸುದ್ದಿಯ ಆಯ್ಕೆ ಕೆಲವೊಂದು ಬಾರಿ ಎಷ್ಟೊಂದು ಸೀಮಿತವಾಗಿ ಬಿಡುತ್ತದೆಂದರೆ ಕೇವಲ ರಾಜಕೀಯ, ನಿರ್ದಿಷ್ಟ ರಾಜಕೀಯ ಸಂದರ್ಭದ ಘಟನೆಗಳಿಗೆ ಸೀಮಿತವಾಗಿ ಬಿಡುತ್ತದೆ. ಈ ವಿಷವೃತ್ತವನ್ನು ಬೇಧಿಸುವ ಕೆಲಸವನ್ನೂ ಮಾಧ್ಯಮಗಳೇ ಮಾಡಬೇಕು. ಇಲ್ಲದಿದ್ದರೆ ಇಡೀ ಸಮುದಾಯದ ಧ್ವನಿಯಾಗುವ ಅವಕಾಶದಿಂದ ಮಾಧ್ಯಮಗಳು ವಂಚಿಸಲ್ಪಡುತ್ತವೆ. ಈ ಸಮೂಹ ಮಾಧ್ಯಮಗಳು ತಮ್ಮ ಜವಾಬ್ದಾರಿಯಿಂದ ಹಿಂತೆಗೆದರೂ ಇಂದಿನ ತೀವ್ರವಾದ ಚಲನಶೀಲ ಸಮಾಜದಲ್ಲಿ ಸಾರಿಗೆ, ಸಂಚಾರ, ವಾರ್ತಾವಾಹಕಗಳಲ್ಲಿ ಉಂಟಾಗಿರುವ ಕ್ರಾಂತಿಕಾರಕ ಬದಲಾವಣೆಗಳು ತಮ್ಮ ಪ್ರಭಾವವನ್ನು ಸಮತೋಲನ ಮಾಡದೆ ಬಿಡದು. ○

## ಅಮ್ಮಾ ನಾ ನಿನ್ನಂತಾಗಲಾರೆ

ಎಷ್ಟಾದರೂ ಹೆಣ್ಣೆಂಬ
ಕೀಳರಿಮೆಯಲಿ ನೀ
ಸೇವೆ ಮಾಡಿದೆ ಅಣ್ಣ–ತಮ್ಮಂದಿರಿಗೆ,
ಹೆದರಿ ಕಂಗಾಲಾಗುತ್ತಿದ್ದೆ
ತಂದೆಯ ಗದರಿಕೆಯ ನುಡಿಗೆ,
ಮದುವೆಯರ್ಥ ತಿಳಿಯುವ ಮೊದಲೇ
ನಿನ್ನ ಕೊರಳ ನೀಡಿದೆ
ಅಪ್ಪ ಹುಡುಕಿದ ಗಂಡಿನ ಕೈಗೆ,
ಕೊರಳ ಬಿಗಿದಿತ್ತು ತಾಳಿ
ನೀನಾಗಿದ್ದೆ ಗೃಹಬಂಧಿ
ಸಹನೆಯ ಸಾಕಾರಮೂರ್ತಿ.
ನಿನ್ನ ಪಾಲಿಗೆ ಅಪ್ಪ ದೇವರು
ಆ ದೇವರಿಗಾಗಿಯೇ ನಿನ್ನ ಮುಡಿಪು,
ಪೂರೈಸಿದೆ ಅವರಾಸೆಗಳನು
ದಿನವಿಡೀ ದುಡಿದೆ ದಣಿವಿಲ್ಲದೆ,
ನೀನಿದ್ದದ್ದೇ ಅದಕ್ಕಾಗಿ
ನಿಸ್ವಾರ್ಥ ಸೇವೆಯೆಂದೆ ನೀನಾದೆ ತ್ಯಾಗಿ!
ಮನೆಯೊಳಗಣ ಬಾವಿ ಕಪ್ಪೆ ನೀನು
ಬೇಡಿತ್ತು ನಿನಗೆ ಹೊರಜಗತ್ತಿನ ಅರಿವು
ಅಂತೂ ಮಕ್ಕಳಾದವು ಒಂದಿಷ್ಟು
ಅವರಾರೈಕೆಯಲ್ಲಿ ದಿನ ಸಂದಿತ್ತು,
ಕೂದಲು ಬೆಳ್ಳಗಾಗಿದೆ,
ಚರ್ಮ ಸುಕ್ಕುಗಟ್ಟಿದೆ,
ಮುದುಕಿ ನೀನಾದೆ
ಆದರೂ......
ನಿನ್ನ ಸೇವೆ ಮುಗಿದಿಲ್ಲ
ಇನ್ನೂ ಮಕ್ಕಳಿವೆ–ಮೊಮ್ಮಕ್ಕಳಿದ್ದಾರೆ,

—ಹೆಚ್. ಆರ್. ರಾಜೇಶ್ವರಿ

## ಖಂಡನೀಯ

ಪ್ರಫುಲ್ಲ ಮಹಂತ ಮಂತ್ರಿ ಮಂಡಲದಲ್ಲಿ ಇತ್ತೀಚೆಗೆ ನಡೆಯಿತೆಂದು ವರದಿಯಾದ ಘಟನೆ ನಿಜಕ್ಕೂ ಅವಮಾನಕರವಾದದ್ದು, ಖಂಡನೀಯವಾದದ್ದು. ವಿಧಾನಸಭೆಯಲ್ಲಿ ಕ್ಯಾಬಿನೆಟ್ ಸಭೆಯಲ್ಲಿ ಚರ್ಚೆ ನಡೆಯುತ್ತಿದ್ದಾಗ ಕುಡಿದು ಮತ್ತನಾಗಿ ಬಂದ ಆಹಾರ ಮತ್ತು ಸಾರ್ವಜನಿಕ ಪೂರೈಕೆಯ ಮಂತ್ರಿ ಪ್ರಬಿನ್ ಗೊಗಾಯ್ ತನ್ನ ಸಹೋದ್ಯೋಗಿಗಳೊಂದಿಗೆ ಅತ್ಯಂತ ಅಸಭ್ಯ ರೀತಿಯಲ್ಲಿ ನಡೆದುಕೊಂಡುದು ವರದಿಯಾಗಿದೆ. ಸಮಾಜ ಕಲ್ಯಾಣ ಇಲಾಖೆಯ ಮಹಿಳಾ ಮಂತ್ರಿ ಶ್ರೀಮತಿ ರೇಖಾ ರಾಣಿ ದಾಸ್ ಬರೋವಾಳನ್ನು ಕುರಿತು ಅಶ್ಲೀಲ ಮಾತುಗಳನ್ನಾಡಿದ್ದಲ್ಲದೆ, ಬಹಿರಂಗವಾಗಿಯೇ ಅವಳ ಮೇಲೆ ಅತ್ಯಾಚಾರ ನಡೆಸುವುದಾಗಿ ಬೆದರಿಕೆ ಹಾಕಿದ್ದಾನೆ. ಪ್ರಜಾಪ್ರಭುತ್ವಕ್ಕೆ ಮಸಿ ಬಳಿಯುವಂತಹ ಕೃತ್ಯ. ಈ ರೀತಿ ಅಸಭ್ಯವಾಗಿ ವರ್ತಿಸಿದ ಮಂತ್ರಿಯನ್ನು ಉಗ್ರವಾಗಿ ಶಿಕ್ಷಿಸಬೇಕು.

11ನೇ ಪುಟದಿಂದ

## ರಂಗಮಾಧ್ಯಮದಲ್ಲಿ ಲಿಂಗಭೇದವೇ ?

ಸಂಖ್ಯಾತ ಸತ್ಯ ಮುರಿಯಬಹುದೆಂಬ ಮಾತು ನನಗೆ ಒಪ್ಪಿಗೆಯಾಗುವುದಿಲ್ಲ. ಇಲ್ಲಿ ಎಂಥ ಬರಹಗಾರ್ತಿಯರ ಸಂಖ್ಯೆ–ಎಂಥ ನಾಟಕಗಳು–ಎಂಥ ನಾಟಕದ ನಿರ್ದೇಶಕಿಯರು ಎಂಬುದು ಮುಖ್ಯ–ಯಾವುದೇ ವ್ಯಕ್ತಿಗಳಿಗೂ ಈ ಮಾತು ಅನ್ವಯವಾಗುತ್ತದೆ.

ಲಕ್ಷಿಸದೆ ದುಡಿದು ನಿಲ್ಲುವ ದಿಟ್ಟೆಯರು ಎಂದೂ ನಿಲ್ಲುತ್ತಾರೆ. ತುಳಿಯುವ ಪ್ರಯತ್ನಗಳು ಹುಸಿಯಾಗುತ್ತಿವೆ ಅನ್ನಿಸಿದಾಗ ಬೆರಗಿನಿಂದ ನೋಡುತ್ತ–ಕೇಳುತ್ತ 'ಮಹಿಳೆ ಎಂಬ ಕಾರಣಕ್ಕೆ ಈ ಗೌರವ' ಸಹ ರಿಯಾಯಿತಿ ಮೂಲಕ ತಮ್ಮ ಔದಾರ್ಯ ತೋರಿಸುವ ಸೋಗೂ ಹಾಕಬಹುದು. ಆದರೆ ನಿಜವಾದ ಕೆಲಸ ಈ ಎಲ್ಲವನ್ನೂ ಮೀರಿ ನಿಲ್ಲುತ್ತದೆ. ಗಂಡು–ಹೆಣ್ಣು ಭೇದ ದಾಟಿ ವಿಷಯವೊಂದೇ ಚರ್ಚೆಗೆ ನಿಲ್ಲುವುದು ಸಾಧ್ಯ. ಅಮೆರಿಕೆಗಿಂತ ಭಾರತದ ಸಂದರ್ಭ ಅಷ್ಟರಮಟ್ಟಿಗೆ (ಅದಕ್ಕೆ ಯಾವುದೇ ಪ್ರಭಾವ ಇದ್ದರೂ ಸರಿಯೇ) ಮುಕ್ತವಾದ ಮನಸ್ಸಿನಿಂದ ಕದ ತೆರೆಯುತ್ತದೆ. ○

---

RN 45577/88
BOOK-POST/PERIODICALS

To,
B. S. Narasimhamurthy

If undelivered please return to :
Jagruthi Mahila Adhyayana Kendra
26, 1st Main Road, Vyalikaval
Bangalore–590 003